# ಜರಿಮಲೆ ಪಾಳೆಯಗಾರರ ಒಂದು ಅಧ್ಯಯನ

(ಎಂ.ಫಿಲ್., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಪ್ರಬಂಧ)

ನೋಂದಣಿ ಸಂಖ್ಯೆ: ೧೬೦೧೦೬೦೩೦೦೨೪




ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬


೨೦೦೬-೨೦೦೭

# ಜರಿಮಲೆ ಪಾಳೆಯಗಾರರ ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)



ನೋಂದಣಿ ಸಂಖ್ಯೆ: ೧೬೦೧೯೦೩೦೦೨೪




ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ–೫೮೩೨೭೬
೨೦೧೬–೧೭

# ಪರಿವಿಡಿ

ಅಧ್ಯಾಯ: ಐದು



ಅಧ್ಯಾಯ: ಆರು

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಮಹತ್ವ

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ಸ್ವರೂಪ
೧.೩. ಅಧ್ಯಯನದ ಮಹತ್ವ
೧.೪. ಅಧ್ಯಯನದ ವ್ಯಾಪ್ತಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಮಹತ್ವ

ಹದಿನೈದು ಮತ್ತು ಹದಿನಾರನೆ ಶತಮಾನಗಳು ವಿಜಯನಗರದ ವೈಭವದ ಕಾಲವಾಗಿತ್ತು. ಆಗ ಸಣ್ಣ ಪುಟ್ಟ ಮಂಡಳಿಗಳು ಅಲ್ಲಲ್ಲಿ ವಿರಾಜಿಸುತ್ತಾ, ಹೋರಾಡುತ್ತಾ, ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಅನೇಕ ಶೂರರಾದ ಯೋಧರುಗಳು ಅವುಗಳನ್ನು ಆಳುತ್ತಾ ವಿಜಯನಗರ ಸಾಮ್ರಾಜ್ಯಕ್ಕೆ ಆಧಾರಸ್ತಂಭದಂತಿದ್ದರು. ವಿಜಯನಗರದ ಅರಸರು ಇವರಿಗೆ ನೀಡಿದ ಪ್ರೋತ್ಸಾಹದಿಂದ ಅನೇಕ ಪಾಳೆಯಪಟ್ಟುಗಳು ಪ್ರಾಬಲ್ಯಕ್ಕೆ ಬಂದವು. ಕ್ರಿ.ಶ. ೧೫೬೫ರಲ್ಲಿ ರಕ್ಕಸ ತಂಗಡಗಿ ಕದನ ಮುಖಾಂತರ ಅಳಿಯ ರಾಮರಾಯನಿಂದ ವಿಜಯನಗರ ಸಾಮ್ರಾಜ್ಯದ ಪತನದಿಂದ ಅಲ್ಲಲ್ಲಿ ಸಣ್ಣ ಸಣ್ಣ ಸ್ವತಂತ್ರ ರಾಜ್ಯಗಳು ಉದ್ಭವವಾಯಿತು. ಇವುಗಳನ್ನು ಹಲವಾರು ಸಾಮಂತ ರಾಜರುಗಳೂ, ಕೆಲವು ಬೇಡ ಯೋಧರೂ ಆಳುತ್ತಿದ್ದರು. ಇವರನ್ನು 'ಪಾಳೆಯಗಾರರು' ಎಂದು ಕರೆಯುತ್ತಿದ್ದರು. ಅಲ್ಲದೆ ದಕ್ಷಿಣ ಭಾರತದಲ್ಲಿ ಹದಿನಾರನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಅತ್ಯಂತ ಪ್ರಭಾವಶಾಲಿಗಳು ಆಗಿದ್ದರು.

ಆದರೆ ವಿಜಯನಗರದ ಸ್ಥಾಪನೆಗಿಂತ ಮೊದಲೇ ಪ್ರಬಲರಾದ ಪಾಳೆಯಗಾರರು ಅನೇಕ ಪಾಳೆಯಪಟ್ಟುಗಳನ್ನು ಕಟ್ಟಿದರು. ಅವರಲ್ಲಿ ಬೇಡಯೋಧರೆಂದು ಪ್ರಸಿದ್ಧಿಯಾದ ಜರಿಮಲೆ ಪಾಳೆಯಗಾರರು ಇತಿಹಾಸದಲ್ಲಿ ಬಹಳ ಪ್ರಮುಖವಾದ ಸ್ಥಾನಮಾನವನ್ನು ಪಡೆದುಕೊಂಡಿದ್ದಾರೆ. ಇವರು ಅಂದರೆ ಜರಿಮಲೆಯ ಪಾಳೆಯಗಾರರು ವಿಜಯನಗರದ ಅರಸರ ಕಾಲದಲ್ಲಿಯೇ ಇದ್ದು ಅವರಿಗೆ ವಿಧೇಯರಾಗಿದ್ದರು. ಹಾಗೂ ಜರಿಮಲೆಯ ಪಾಳೆಯಗಾರರು ವಿಜಯನಗರ ಅರಸರ ಕಾಲದಿಂದ ಹೈದರಾಲಿಯ ಕಾಲದವರೆಗೂ ಸುಮಾರು ವರ್ಷಗಳ ಕಾಲ ಆಳ್ವಿಕೆ ಮಾಡಿದರು. ಜರಿಮಲೆ ಪಾಳೆಯಗಾರರ ಚರಿತ್ರೆಗೆ, ಕರ್ನಾಟಕದ ಕೈಫಿಯತ್ತುಗಳು, (ಬಳ್ಳಾರಿ) ಚಂದ್ರವಳ್ಳಿ, ಮೈಸೂರು ಸ್ಟೇಟ್ ಗೆಜೆಟಿಯರ್ಸ್, ಮೆಕೆಂಜಿಯು ಸಂಗ್ರಹಿಸಿರುವ ಜರಿಮಲೆ ಸಂಸ್ಥಾನದ ವಂಶಾವಳಿ ಹಾಗೂ ಮನ್ರೋನ ರಿಪೋರ್ಟುಗಳೇ ಮುಖ್ಯ ಆಧಾರಗಳು. ಆದರೆ

ಈ ಎಲ್ಲಾ ಆಧಾರಗಳಲ್ಲಿ ಕೊಟ್ಟರು ಪ್ರತಿಯೊಬ್ಬ ಪಾಳೆಯಗಾರನು ಆಳಿದ ಕಾಲ, ಒಂದಕ್ಕೊಂದು ಮೇಳೈಸುವುದಿಲ್ಲ. ಆದರೂ ಸಹ ದಕ್ಷಿಣ ಭಾರತದ ಚರಿತ್ರೆಯಲ್ಲಿ ಮುಖ್ಯ ಪಾತ್ರವಹಿಸಿದ್ದಾರೆ.

## ೧.೧. ಅಧ್ಯಯನದ ಉದ್ದೇಶ

ಜರಿಮಲೆ ಪಾಳೆಯಗಾರರು ಮಧ್ಯಯುಗೀನ ದಕ್ಷಿಣ ಭಾರತದ ಚರಿತ್ರೆಯಲ್ಲಿ ಮತ್ತು ಬಳ್ಳಾರಿಯ ಕೂಡ್ಲಿಗಿ ಪ್ರಾಂತ್ಯದ ಜರಿಮಲೆಯಲ್ಲಿ ಇವರ ಆಳ್ವಿಕೆ ಮಹತ್ವದ ಪಾತ್ರ ವಹಿಸಿದೆ ಎಂದು ಹೇಳಬಹುದು. ಬೃಹತ್ ಸಾಮ್ರಾಜ್ಯದವಾದ ವಿಜಯನಗರವನ್ನು ಕಾನೂನು ವ್ಯವಸ್ಥೆಯ ಮೂಲಕ ನಿಯಂತ್ರಣದಲ್ಲಿಟ್ಟುಕೊಳ್ಳಲು, ಹೊಸ ರಾಜ್ಯಗಳನ್ನು, ಪ್ರದೇಶಗಳನ್ನು ಅಥವಾ ಪ್ರಾಂತ್ಯಗಳನ್ನು ವಶಪಡಿಸಿಕೊಳ್ಳಲು ಮತ್ತು ಜರಿಮಲೆ ಪ್ರಾಂತ್ಯದ ಆಡಳಿತದ ವಿಸ್ತೀರ್ಣವನ್ನು ಹೆಚ್ಚಿಸಲು ಹಾಗೂ ಇತರ ಮುಖ್ಯ ಶತ್ರು ರಾಜ್ಯಗಳನ್ನು ಗೆಲ್ಲಲು ಅಲ್ಲದೆ ಶತ್ರುಗಳೊಂದಿಗೆ ಯುದ್ಧ ಮಾಡಲು ಜರಿಮಲೆಯ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ಅರಸರಿಗೆ ವಿಶೇಷವಾಗಿ ಜರಿಮಲೆಯ ಸಂಸ್ಥಾನದ ವಂಶಿಕನಾದ ಪಾಪಣ್ಣ ನಾಯಕನು ವಿಜಯನಗರದ ಚಕ್ರವರ್ತಿಯಾದ ಸಾಳುವ ವೀರನರಸಿಂಹನ (ಕ್ರಿ.ಶ. ೧೪೯೧–೧೫೦೫) ಸೇವಕರಲ್ಲಿ ಒಬ್ಬನಾಗಿ ಸೇವೆ ಸಲ್ಲಿಸುತ್ತಿದ್ದನು. ಚಕ್ರವರ್ತಿಯಾದ ಸಾಳುವ ವೀರನರಸಿಂಹನು ಕಾಂಚಿಪುರಂಗೆ ಹೋದ ಸಂದರ್ಭದಲ್ಲಿ ಜೊತೆಗಿದ್ದು ಅವನ ವಿಶ್ವಾಸಕ್ಕೆ ಪಾತ್ರನಾಗಿದ್ದನು. ವಿಜಯನಗರದ ಸುತ್ತ ಹಾವಳಿ ಮಾಡುತ್ತಿದ್ದ ಹಾಗೂ ಜನರನ್ನು ಸುಲಿಗೆ ಮಾಡುತ್ತಿದ್ದ ದಂಗೆಕೋರರನ್ನು ಹತ್ತಿಕ್ಕಲು ಸಾಳುವ ವೀರನರಸಿಂಹನು ಪಾಪಣ್ಣನಾಯಕನಿಗೆ ಆದೇಶಿಸಿದಾಗ ತನ್ನ ಶಕ್ತಿ ಸಾಮಾರ್ಥ್ಯಗಳಿಂದ ಆ ದಂಗೆಯನ್ನು ಅಡಗಿಸಿದನು. ಇದರಿಂದ ಸಂಪ್ರೀತನಾದ ಚಕ್ರವರ್ತಿಯು ಪಾಪಣ್ಣನಾಯಕನಿಗೆ ವಡ್ಡು, ದರೋಜಿ ಗ್ರಾಮಗಳನ್ನು ಬಳುವಳಿಯಾಗಿ ನೀಡಿದನು. (ಮೆಕೆಂಜಿ The Vamshavallee of Jeremale Samsthanfamily) ಹೀಗೆ ಜರಿಮಲೆ ಪಾಳೆಯಗಾರರು ಅಲ್ಲಿಯ ಅರಸರಿಗೆ ಸಹಾಯ ಮಾಡುತ್ತಿದ್ದುದ್ದಲ್ಲದೆ ಸಾಮ್ರಾಜ್ಯದಲ್ಲಿ ಶಾಂತಿ ಸಮೃದ್ಧಿ ನೆಲೆಗೊಳ್ಳಲು ಕಾರಣರಾಗಿದ್ದರು. ತಮ್ಮ ನಾಡಿಗಾಗಿ ಜರಿಮಲೆಯ ಪ್ರಜೆಗಳಿಗಾಗಿ ಶ್ರಮಿಸಿದ್ದರು.

ಜರಿಮಲೆಯ ಪಾಳೆಯಗಾರರು ಅನೇಕ ಜನೋಪಯೋಗಿಯಾದ ಕಾರ್ಯಗಳನ್ನು ಮಾಡಿದ್ದರು. ಆದರೆ ಅನೇಕ ರೀತಿಯಲ್ಲಿ ಅಧ್ಯಯನವನ್ನು ಕೈಗೊಂಡಾಗ ಜರಿಮಲೆ ಪಾಳೆಯಗಾರರ ಬಗ್ಗೆ ಚರಿತ್ರೆಯಲ್ಲಿ ಯಾವ ಮಹತ್ವವನ್ನು ಕೊಟ್ಟಿಲ್ಲದೇ ಇರುವುದು ವಿಷಾದಕರವಾಗಿದೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯ ಜರಿಮಲೆ ಪಾಳೆಯಗಾರರು ಗಾತ್ರದಲ್ಲಿ, ಸಂಪತ್ತಿನಲ್ಲಿ, ಆಡಳಿತದಲ್ಲಿ ಚಿತ್ರದುರ್ಗದ ಪಾಳೆಯಗಾರರಿಗಿಂತ ಚಿಕ್ಕವರಾಗಿದ್ದರೂ ಶೌರ್ಯ ಸಾಹಸದಲ್ಲಿ ಜರಿಮಲೆಯ ಪಾಳೆಯಗಾರರು ಕಡಿಮೆ ಏನಿರಲಿಲ್ಲ. ಹೀಗಿದ್ದರೂ ಇವರುಗಳಿಗೆ ಚರಿತ್ರೆಯಲ್ಲಿ ಯಾವ ಸ್ಥಾನವು ಇಲ್ಲ. ಕರ್ನಾಟಕದ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯ ಜರಿಮಲೆ ಪಾಳೆಯಗಾರರು ಮಹಾ ಸಾಮ್ರಾಜ್ಯವಾದ ವಿಜಯನಗರ ಸಾಮ್ರಾಜ್ಯದೊಂದಿಗೆ ಯಾವ ರೀತಿಯಾದ ಸಂಬಂಧವನ್ನು ಆಡಳಿತದಲ್ಲಿ ಶಾಂತಿ, ಸಮೃದ್ಧಿಯಲ್ಲಿ ಹಾಗೂ ವಿಜಯನಗರ ಸಾಮ್ರಾಜ್ಯದ ಸಂದರ್ಭದಲ್ಲಿ

ಜರಿಮಲೆ ಪಾಳೆಯಗಾರರ ಪರಿಸ್ಥಿತಿ ಮತ್ತು ಜರಿಮಲೆಯ ಪಾಳೆಯಗಾರರ ರಾಜಕೀಯ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಹಾಗೂ ಸಾಮಾಜಿಕ ವ್ಯವಸ್ಥೆಯ ಅಂಶಗಳು ಅಲ್ಲದೆ ಧಾರ್ಮಿಕ, ಸಾಂಸ್ಕೃತಿಕ ಅಂಶಗಳನ್ನು ಮುಂತಾದವುಗಳನ್ನು ತಿಳಿಯಲು ಅಂದರೆ ಜರಿಮಲೆ ಪಾಳೆಯಗಾರರ ಪ್ರಮುಖ ಕೊಡುಗೆಗಳಾದ ದೇವಾಲಯಗಳು, ಆಚರಣೆಗಳು, ಹಬ್ಬ ಹರಿದಿನಗಳು, ಅಲ್ಲದೆ ಜರಿಮಲೆ ಪಾಳೆಯಗಾರರು ಸ್ಥಳೀಯ ಪಾಳೆಯಗಾರರ ಜೊತೆಗಿನ ಸಂಬಂಧಗಳು ಯಾವ ರೀತಿಯಲ್ಲಿ ಇದ್ದವು ಅಲ್ಲದೆ ಅವರ ಜೊತೆಗೆ ವೈವಾಹಿಕ ಸಂಬಂಧ ಯಾವ ರೀತಿಯಲ್ಲಿತ್ತು ಹಾಗೂ ಸಾಮ್ರಾಜ್ಯದ ಅಂದರೆ ಜರಿಮಲೆ ಸಂಸ್ಥಾನವನ್ನು ಅಭಿವೃದ್ಧಿಗೊಳಿಸುವಲ್ಲಿ, ಅಥವಾ ಸಂಸ್ಥಾನವನ್ನು ವಿಸ್ತರಿಸುವಲ್ಲಿ ಒಳ್ಳೆಯ ಸ್ನೇಹ ಸಂಬಂಧವನ್ನು ಜರಿಮಲೆಯ ಪಾಳೆಯಗಾರರು ಅಭಿವೃದ್ಧಿಪಡಿಸಿಕೊಂಡಿರುವುದನ್ನು ಹೀಗೆ ಈ ಎಲ್ಲಾ ಅಂಶಗಳನ್ನು ಅಧ್ಯಯನದ ಮೂಲಕ ತಿಳಿಸಲು ಪ್ರಯತ್ನಿಸುವುದೇ ಈ ಪ್ರಬಂಧದ ಪ್ರಮುಖ ಉದ್ದೇಶವಾಗಿದೆ.

ಜರಿಮಲೆಯ ಪಾಳೆಯಗಾರರು ಕ್ರಿ.ಶ. ೧೫೦೦ ರಿಂದ ೧೮೦೦ರವರೆಗೆ ವಿವಿಧ ತಮಗಿಂತ ಬಲಾಢ್ಯರಾದವರ ಆಳ್ವಿಕೆಗೊಳಪಟ್ಟು ಬಹಳ ಕಷ್ಟಕರ ಪರಿಸ್ಥಿತಿಯಲ್ಲಿ ಆಳ್ವಿಕೆ ಮಾಡಿದವರೇ ಈ ಜರಿಮಲೆ ನಾಯಕರು. ಇವರು ವಿಜಯನಗರದ ಚಕ್ರವರ್ತಿಗಳಿಂದ ಕೆಲ ಗ್ರಾಮಗಳನ್ನು ಬಳುವಳಿಯಾಗಿ ಪಡೆದುಕೊಂಡು, ನಂತರ ಆದಿಲ್‌ಶಾಹಿಗಳ ಆಳ್ವಿಕೆಗೊಳಪಟ್ಟು ಹರಪನಹಳ್ಳಿ, ಚಿತ್ರದುರ್ಗದವರ ಜೊತೆ ನಮ್ಮ ಉಳಿವಿಗಾಗಿ ಹೋರಾಟ ಮಾಡಿ, ಹೈದರ್ ಅಲಿಯಿಂದ ಸಹಾಯ ಪಡೆದು ಮುಕ್ತರಾಗಿ ಟಿಪ್ಪುವಿನ ಕಾಲದಲ್ಲಿ ಪದಚ್ಯುತರಾಗಿ, ನಿಜಾಮನ ನಿಯಂತ್ರಣಕ್ಕೆ ಒಳಪಟ್ಟು ಖಂಡಣಿ ಹಣ ನೀಡಲಾಗಿದೆ. ಕ್ರಿ.ಶ. ೧೮೦೦ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಅಧೀನಕ್ಕೆ ಒಳಗಾಗಿ ಕೊನೆಗೆ ರಾಜ್ಯ ಕಳೆದುಕೊಂಡು ಅವರಿಂದ ವಿಶ್ರಾಂತ ವೇತನ ಪಡೆಯಲು ಪ್ರಯತ್ನಿಸಿದವರ ಸಂಕ್ಷಿಪ್ತ ಚರಿತ್ರೆಯ ಇತಿಹಾಸವೇ ಈ ಜರಿಮಲೆ ಪಾಳೆಯಗಾರರು ಸುಮಾರು ೩೦೦ ವರ್ಷಗಳ ಕಾಲ ಬಹಳ ಕೀರ್ತಿವಂತರಾಗಿ, ದಕ್ಷತೆಯಿಂದ ನಿಷ್ಟೆಯಿಂದ ಕೀರ್ತಿವಂತರಾಗಿ ಹೈದರಾಲಿ, ಟಿಪ್ಪುಸುಲ್ತಾನ್, ಮರಾಠ ಹಾಗೂ ಬ್ರಿಟಿಷರನ್ನು ಧೈರ್ಯವಾಗಿ ಎದುರಿಸಿ ತಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಇಂತಹ ಜರಿಮಲೆಯ ಪಾಳೆಯಗಾರರನ್ನು ಅಜ್ಞಾತದಿಂದ ಬೆಳಕಿಗೆ ತರುವುದೇ ಈ ಸಂಪ್ರಬಂಧದ ಮುಖ್ಯ ಉದ್ದೇಶವಾಗಿದೆ. ಈ ಸಂಪ್ರಬಂಧಕ್ಕೆ "ಜರಿಮಲೆ ಪಾಳೆಗಾರರು" ಎಂದು ಹೆಸರಿಸಲಾಗಿದೆ.

### ೧.೨. ಅಧ್ಯಯನದ ಸ್ವರೂಪ

ವಿಜಯನಗರ ಸಾಮ್ರಾಜ್ಯವು ಬೃಹತ್ ಸಾಮ್ರಾಜ್ಯವಾದ್ದರಿಂದ ಅದನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಯಾವಾಗಲೂ ಜಾಗರೂಕರಾಗಿರಬೇಕಾಗಿತ್ತು. ಆದ್ದರಿಂದ ಅವರಿಗೆ ಅಲ್ಲಲ್ಲಿ ಸೈನ್ಯಗಳನ್ನು ಕಟ್ಟುವುದು ಅಗತ್ಯವಾಗಿತ್ತು. ಅರಸರಿಂದ ಮಾನ್ಯ ಪಡೆದ ಸಾಮಾಂತರು ಬೇರೆ ಬೇರೆ ಪ್ರಾಂತಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ನಿರ್ದಿಷ್ಟ ಪ್ರಮಾಣದ ಸೈನ್ಯವನ್ನು ಯಾವಾಗಲೂ ಸಿದ್ಧವಾಗಿಟ್ಟುಕೊಂಡಿರಬೇಕಾಗಿತ್ತು. ಅರಸರು ಯುದ್ಧದ ಸಮಯಗಳಲ್ಲಿ ಅವುಗಳನ್ನು

ಬಳಸಿಕೊಳ್ಳುತ್ತಿದ್ದರು. ಇದಲ್ಲದೆ ಅವರು ಅರಸರಿಗೆ ತೆರಿಗೆಯನ್ನು ಸಂಗ್ರಹಿಸಿ ಕೊಡಬೇಕಾಗಿತ್ತು. ಇದಕ್ಕಾಗಿ ಅವರಿಗೆ, ಅವರ ಸೇವೆಗೆ ಅನುಗುಣವಾಗಿ ಭೂಮಿಯನ್ನು ಕೊಡಲಾಗುತ್ತಿತ್ತು. ಸಾಮ್ರಾಟರು ಕೈಗೊಂಡ ರಾಜ್ಯ ವಿಸ್ತರಣಾ ಹಾಗೂ ಆಂತರಿಕ ಕಲಹಗಳನ್ನು ಶಮನಗೊಳಿಸುವ ಕಾರ್ಯಗಳಲ್ಲಿ ಇವರು ಭಾಗಿಗಳಾಗಿ, ಸಾಮ್ರಾಜ್ಯದಲ್ಲಿ ಶಾಂತಿ ಸಮೃದ್ಧಿಗಳನ್ನು ನೆಲಗೊಳಿಸಲು ಕಾರಣರಾಗಿದ್ದರು. ಸಾಮ್ರಾಟರಿಗೆ ಸಲ್ಲಬೇಕಾದ ತೆರಿಗೆ ಸುಂಕ ಇತ್ಯಾದಿಗಳನ್ನು ಕಾಲ ಕಾಲಕ್ಕೆ ಸಂಗ್ರಹಿಸಿ ಕೊಡುವುದರ ಮೂಲಕ ಸಾಮ್ರಾಟರ ಕೃಪಾಕಟಾಕ್ಷಕ್ಕೆ ಪಾತ್ರರಾಗಿರುತ್ತಿದ್ದರು. ಬಿರುದು ಬಾವಲಿಗಳನ್ನು ಪಡೆದುಕೊಳ್ಳುತ್ತಿದ್ದರು.

ಇವರನ್ನು ಸಾಮ್ರಾಟರು 'ಅಮರಗಾರ' ಅಥವಾ 'ಅಮರನಾಯಕ' ಎಂದು ಕರೆಯುತ್ತಿದ್ದರು. 'ಅಮರ' ಎಂಬುದು ಒಂದು ಸಾವಿರ ಕಾಲ್ದಳದ ಒಡೆತನ. 'ಅಮರನಾಯಕ'ತನ ಎಂಬುದು ಸ್ಥಳೀಯವಾಗಿ ಕಾಲಾಳು ಮತ್ತು ಅಶ್ವದಳವನ್ನು ಒಳಗೊಂಡ ಸೈನ್ಯವನ್ನು ಹೊಂದಿದ್ದು, ಅದರ ಮುಂದಾಳತ್ವವನ್ನು ವಹಿಸಿ ಸಾಮ್ರಾಟನ ಆಜ್ಞೆಯನ್ನು ಪಾಲಿಸುವುದಾಗಿತ್ತು. ಅಮರನಾಯಕನಿಗೆ ಸಾಕಷ್ಟು ಭೂ ಪ್ರದೇಶ ಮತ್ತು ಸೈನ್ಯದ ಒಡೆತನ ಇದ್ದುದರಿಂದ ಅವನು ಸಹಜವಾಗಿಯೇ ಸ್ಥಳೀಯವಾಗಿ ಹೆಚ್ಚು ಪ್ರಭಾವಶಾಲಿಯಾಗಿರುತ್ತಿದ್ದನು. ಅಮರನಾಯಕರು ಯುದ್ಧದ ಸಮಯದಲ್ಲಿ ತಮ್ಮ ಸೈನ್ಯವನ್ನು ರಾಜನ ಸೇನಾ ಬಿಡಾರಕ್ಕೆ ಕಳುಹಿಸಿ, ಪ್ರಭುಗಳ ದರ್ಶನಕ್ಕೆ ಹೋದಾಗಲೆಲ್ಲಾ ರಾಜಧಾನಿಯ ಹೊರಗಿನ 'ಪಾಳೆಯ' ಎಂಬ ಸೇನಾ ಬಿಡಾರದಲ್ಲಿ ನಿಲ್ಲುತ್ತಿದ್ದರು. 'ಪಾಳೆಯ' ಎಂದರೆ ದಂಡು, ಸೈನ್ಯ, ಸೇನಾ ವಿಭಾಗ, ಶಿಬಿರ, ಠಾಣ್ಯ, ಇದರ ಮುಖ್ಯಸ್ಥನೇ 'ಪಾಳೆಯಗಾರ' ವಿಜಯನಗರ ಸಾಮ್ರಾಜ್ಯದಲ್ಲಿ ಇಂತಹ ಇನ್ನೂರು ಜನ ಅಮರನಾಯಕರು ಅಥವಾ ಪಾಳೆಯಗಾರರು ಇದ್ದರೆಂಬುದು ತಿಳಿದುಬರುತ್ತದೆ. ಆದರೆ ಕೆಲವು ಪಾಳೆಯಗಾರರು ವಿಜಯನಗರದ ಕಾಲಕ್ಕೂ ಮುಂಚಿನಿಂದಲೇ ಸಣ್ಣ ಸಣ್ಣ ರಾಜ್ಯಗಳಲ್ಲಿ ಆಳುತ್ತಿದ್ದರೆಂಬುದು ಕೆಲವು ಆಧಾರಗಳಿಂದ ತಿಳಿದುಬರುತ್ತದೆ. ಪಾಳೆಯಗಾರರ ಸ್ಥಾನಮಾನಗಳಿಂದ ಅವರನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು. ಮೊದಲನೆಯ ವರ್ಗಕ್ಕೆ ಸೇರಿದ ಪಾಳೆಯಗಾರರು, ತಮ್ಮ ಪ್ರಭುವಿಗೆ ವಿಧೇಯರಾಗಿದ್ದು, ಅವರ ಅಂಕೆಯಲ್ಲಿದ್ದ ಭೂವಿಸ್ತಾರ ಸಂಗ್ರಹಿಸಿದ ಐಶ್ವರ್ಯ ಪಡೆದಿದ್ದ ಅಧಿಕಾರ ಮತ್ತು ಗೌರವಗಳ ದೃಷ್ಟಿಯಿಂದ ಮೊಲದನೆಯ ವರ್ಗಕ್ಕೆ ಸೇರಿದ ಪಾಳೆಯಗಾರರು. ಇವರು ಸ್ವತಂತ್ರವಾಗಿ ಭೂಮಿಯನ್ನು ಪರಭಾರೆ ಮಾಡುವ ಹಕ್ಕನ್ನು ಪಡೆದಿರುತ್ತಾರೆ. ಕೋಟೆಗಳನ್ನು ಕಟ್ಟಲು, ತಮ್ಮ ಸ್ವಂತದ ಸೇನೆಯನ್ನು ಇಟ್ಟುಕೊಳ್ಳಲು ಸಾಧ್ಯವಿತ್ತು.

ಎರಡನೆಯ ವರ್ಗಕ್ಕೆ ಸೇರಿದ ಪಾಳೆಯಗಾರರಿಗೆ, ತಮ್ಮ ಪ್ರದೇಶದ ಭೂಮಿಯನ್ನು ಚಕ್ರವರ್ತಿಯ ಹೆಸರಿನಿಂದಲೇ ಪರಭಾರೆ ಮಾಡಬೇಕಾಗಿತ್ತು. ಇವರು ಹಳ್ಳಿಗಳನ್ನಷ್ಟೇ ತಮ್ಮ ಹತೋಟಿಯಲ್ಲಿಟ್ಟುಕೊಳ್ಳಬಹುದಿತ್ತು. ಇದರಿಂದ ಅವರ ಬಲವು ಸಂಪತ್ತೂ ಸೀಮಿತವಾಗುತ್ತಿತ್ತು. ಸೈನ್ಯವು ಚಿಕ್ಕದಿರುತ್ತಿತ್ತು. ಇನ್ನೂ ಮೂರನೇ ವರ್ಗದವರು ಒಂದೇ ಹಳ್ಳಿಯನ್ನು ಪಡೆದಿರುತ್ತಿದ್ದರು. ಚಕ್ರವರ್ತಿಯ ನೇರ ನಿಯಂತ್ರಣದಲ್ಲಿರುತ್ತಿದ್ದರು. ದಾನ ಮಾಡುವಾಗ ತಮ್ಮ ಪ್ರಭುಗಳ

ಪೂರ್ವಾನುಮತಿಯನ್ನು ಪಡೆಯಬೇಕಾಗುತ್ತಿತ್ತು. ಇವರಿಗೆ ಬೇರೆ ಯಾವ ಅಧಿಕಾರವು ಇರುತ್ತಿರಲಿಲ್ಲ. ಹದಿನೇಳನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಅರವೀಡು ವಂಶದ ಪತನವಾದ ಮೇಲೆ ಎಲ್ಲಾ ಪಾಳೆಯಪಟ್ಟುಗಳು ಸ್ವತಂತ್ರವಾದವು. ಕರ್ನಾಟಕದಲ್ಲಿ ಹೀಗೆ ಸ್ವತಂತ್ರವಾದ ಪಾಳೆಯಪಟ್ಟುಗಳು ಅರವತ್ತಕ್ಕೂ ಹೆಚ್ಚು ಇದ್ದು ಇನ್ನು ಸಣ್ಣ ಸಣ್ಣ ಪಾಳೆಯಪಟ್ಟುಗಳು ಸೇರಿದರೆ ಎಂಭತ್ತಕ್ಕೂ ಹೆಚ್ಚಾಗುವುದು. ಕೊನೆಗೆ ತಮ್ಮ ತಮ್ಮಲ್ಲೇ ಕಚ್ಚಾಟ ಅಧಿಕಾರ ವಿಸ್ತೀರ್ಣಕಾಂಕ್ಷೆ, ಈರ್ಷೆ ಮೊದಲಾದ ಕಾರಣಗಳಿಂದ ಹದಿನೆಂಟನೆಯ ಶತಮಾನದ ಆದಿಭಾಗದ ಹೊತ್ತಿಗೆ ಅನೇಕ ಪಾಳೆಯಪಟ್ಟುಗಳು ಶಿಥಿಲವಾದವು. ಮುಂದೆ ಹೈದರಾಲಿ, ಟಿಪ್ಪುಸುಲ್ತಾನರು ಪಾಳೆಯಪಟ್ಟುಗಳನ್ನೆಲ್ಲಾ ಕೊನೆಗಾಣಿಸಿ ಅವುಗಳನ್ನು ಮೈಸೂರು ರಾಜ್ಯಕ್ಕೆ ಸೇರಿಸಿದರು. ಟಿಪ್ಪುಸುಲ್ತಾನ ಹಾಗೂ ಇಂಗ್ಲೀಷರ ಯುದ್ಧದ ಕಾಲದಲ್ಲಿ ಮತ್ತು ಸ್ವಲ್ಪ ಅನಂತರ ಕೆಲವು ಪಾಳೆಯಗಾರರು ಮತ್ತೆ ತಲೆಯೆತ್ತಲು ಪ್ರಯತ್ನಿಸಿದರೂ ಸಫಲರಾಗಲಿಲ್ಲ. ಈಸ್ಟ್ ಇಂಡಿಯಾ ಕಂಪನಿಯಿಂದ ಪಾಳೆಯಪಟ್ಟುಗಳನ್ನು ಕಳೆದುಕೊಂಡಿದ್ದ ಪಾಳೆಯಗಾರರ ವಂಶೀಯರಿಗೆ ಜೀವನಾಂಶ ಸಿಗುತ್ತದೆ.

### ೧.೩. ಅಧ್ಯಯನದ ಮಹತ್ವ

ಪಾಳೆಯಗಾರರು ವೀರವರ್ಗಕ್ಕೆ ಸೇರಿದವರು. ಪರಾಕ್ರಮಿಗಳು, ಶತ್ರುಗಳಿಗೆ ಭಯಂಕರರಾಗಿದ್ದರು. ತಮ್ಮನ್ನು ಆಶ್ರಯಿಸಿದವರನ್ನು ಕಾಪಾಡುತ್ತಿದ್ದರು. ಧರ್ಮದಲ್ಲಿ ಶ್ರದ್ಧೆಯುಳ್ಳವರಾಗಿದ್ದರು. ಅವರ ಆಳ್ವಿಕೆಯ ಕಾಲದಲ್ಲಿ ಪ್ರಜೆಗಳು ಒಟ್ಟಿನಲ್ಲಿ ನೆಮ್ಮದಿಯಿಂದ ಇರುತ್ತಿದ್ದರು. ಯುದ್ಧದ ಕಾಲದಲ್ಲಿ ತಮ್ಮ ಪಾಳೆಯಗಾರನಇಗೆ ಜೀವ ಕೊಡಲು ಸಿದ್ಧರಾಗಿರುತ್ತಿದ್ದರು. ಧನಸಹಾಯ ಮಾಡುತ್ತಿದ್ದರು. ಪಾಳೆಯಗಾರರು ನಾಡಿನ ಒಳತಿಗಾಗಿ ಶ್ರಮಿಸುತ್ತಿದ್ದರು. ಪ್ರಾಚೀನ ಸಂಸ್ಕೃತಿಯನ್ನು ಕಾಪಾಡಲು ಬೆಂಬಲ ನೀಡುತ್ತಿದ್ದರು. ದೇವಾಲಯ, ಕೆರೆಕಟ್ಟೆಗಳನ್ನು ಕಟ್ಟಿಸುವುದು ಜೀರ್ಣೋದಧಾರ ಮಾಡುವುದು, ವಿದ್ಯಾಭ್ಯಾಸಕ್ಕೆ ಸಹಾಯ ಮಾಡುವುದು, ಲಲಿತಕಲೆಗಳಿಗೆ ಪ್ರೋತ್ಸಾಹ ಕೊಡುವುದು ಮುಂತಾದ ಸಾಮಾಜಿಕ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಅವರಲ್ಲಿ ಬಹುಪತ್ನಿತ್ವವಿತ್ತು. ಸತಿಪದ್ಧತಿಯನ್ನು ಅನುಸರಿಸುತ್ತಿದ್ದರು. ಪ್ರತಿಯೊಬ್ಬ ಪಾಳೆಯಗಾರನೂ ತನ್ನದೇ ಒಂದು 'ಮಂತ್ರಿ ಮಂಡಲ'ವನ್ನು ಹೊಂದಿದ್ದನು. ಗ್ರಾಮಾಡಳಿತವು 'ಬರಾಬಲೂತಿ' ಪದ್ಧತಿಯಿಂದ ನಡೆಯುತ್ತಿತ್ತು.

### ೧.೪. ಅಧ್ಯಯನದ ವ್ಯಾಪ್ತಿ

ಅಧ್ಯಯನವನ್ನು ಐದು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಪ್ರಾಂತ್ಯದ ಜರಿಮಲೆ ಪಾಳೆಯಗಾರರ ವಿಜಯನಗರ ಕಾಲದಲ್ಲಿ ಅವರ ಆಡಳಿತ ಪರಿಸ್ಥಿತಿ ಬಗ್ಗೆ ಅಧ್ಯಯನ ಹಾಗೂ ಜರಿಮಲೆ ಪಾಳೆಯಗಾರರ ರಾಜಕೀಯ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಯ ಬಗ್ಗೆ ಅಧ್ಯಯನ ಮತ್ತು ಜರಿಮಲೆ ಪಾಳೆಯಗಾರರ ಕೊಡುಗೆಗಳಾದ ದೇವಸ್ಥಾನಗಳ ಬಗ್ಗೆ, ಹಬ್ಬ ಆಚರಣೆಗಳು, ಕೋಟೆಗಳ ಬಗ್ಗೆ ಅಲ್ಲದೆ ಜರಿಮಲೆ ಪಾಳೆಯಗಾರರು ಇತರ ಪಾಳೆಯಗಾರರ ಜೊತೆಗೆ ಸಂಬಂಧಗಳ ಬಗ್ಗೆ ಅಧ್ಯಯನವನ್ನು

ಮಾಡಲಾಗಿದೆ. ಅಲ್ಲದೆ ಜರಿಮಲೆ ಪಾಳೆಯಗಾರರ ಯುದ್ಧದ ವ್ಯವಸ್ಥೆಗಳನ್ನು ಆಡಳಿತದ ವಿಭಾಗದ ಕ್ರಮಗಳನ್ನು ವಿವರಿಸಿದೆ. ಹೈದರಾಲಿ, ಟಿಪ್ಪುಸುಲ್ತಾನ್‌ರೊಡನೆ ಇದ್ದ ಅವರ ಸಂಬಂಧವನ್ನು ಹೇಳಿದೆ. ಅವರ ಆರ್ಥಿಕ ವ್ಯವಸ್ಥೆಗೆ ಸಂಬಂಧಪಟ್ಟಂತೆ ನೈಸರ್ಗಿಕ ಹಾಗೂ ಭೂಸಂಪತ್ತುಗಳ ಪ್ರಕಾರಗಳಲ್ಲದೆ ಗೇಣಿ, ಕೃಷಿ ಪದ್ಧತಿ, ಭೂಮಾಪನ ಪದ್ಧತಿ, ನೀರಾವರಿ, ಹೈನುಗಾರಿಕೆ ಮುಂತಾದವುಗಳನ್ನು ಪ್ರಸ್ತಾಪಿಸಲಾಗಿದೆ. ಅವರ ಧಾರ್ಮಿಕ ವ್ಯವಸ್ಥೆಗೆ ಸಂಬಂಧಪಟ್ಟಂತೆ ಮತ-ಧರ್ಮಗಳಿಗೆ ಅವರಿತ್ತ ಪ್ರೋತ್ಸಾಹ ಹಾಗೂ ಹಲವಾರು ದೇವಾಲಯಗಳ ರಚನೆ, ಅಲ್ಲದೆ ಜರಿಮಲೆ ಪಾಳೆಯಗಾರರ ಸಾಮಾಜಿಕ ವ್ಯವಸ್ಥೆಗೆ ಸಂಬಂಧಪಟ್ಟಂತೆ, ಸಾಮಾಜಿಕ ಘಟಕಗಳಾದ ವರ್ಗ, ವರ್ಣ, ಜಾತಿಗಳ ವ್ಯವಸ್ಥೆಯ ಬಗ್ಗೆ, ಸ್ತ್ರೀಯರ ಸ್ಥಾನಮಾನ ಮನರಂಜನೆಗಳು ಮುಂತಾದವುಗಳನ್ನು ಚರ್ಚಿಸಲಾಗಿದೆ.



## ಅಧ್ಯಾಯ : ಎರಡು

# ವಿಜಯನಗರ ಸಾಮ್ರಾಜ್ಯ ಮತ್ತು ಪಾಳೆಯಗಾರರು

ವಿಜಯನಗರದ ಅರಸರ ಕಾಲದಲ್ಲಿ ವಿಸ್ತಾರವಾಗಿದ್ದ ಸಾಮ್ರಾಜ್ಯದ ಸುಗಮವಾದ ಆಡಳಿತಕ್ಕಾಗಿ ಅವರು ಅಲ್ಲಲ್ಲಿಯ ಮಾಂಡಲೀಕರು ಸಾಮಂತರುಗಳಿಗಲ್ಲದೆ, ಕೆಲವು ಶೂರ, ಸಾಹಸಿ ಬೇಡರುಗಳಿಗೆ ಭೂದಾನ ನೀಡಿ, ಸ್ಥಾನಿಕ ಪ್ರಭುಗಳನ್ನಾಗಿ ನೇಮಿಸಿದರು. ಈ ಸ್ಥಾನಿಕ ಪ್ರಭುಗಳು ಸೈನ್ಯವನ್ನು ಕಟ್ಟಿಕೊಂಡು ಪಾಳ್ಯಗಳಲ್ಲಿ ನಿಲ್ಲುತ್ತಿದ್ದುದರಿಂದ ಇವರನ್ನು 'ಪಾಳೆಯಗಾರರು' ಎಂದು ಸಂಬೋಧಿಸುತ್ತಿದ್ದರು. ಆಡಳಿತ ಸುಗಮವಾಗಿ ಸಾಗಲು ವಿಜಯನಗರದ ಅರಸರಿಗೆ ಇವರು ಸಹಾಯಕರಾಗಿದ್ದಲ್ಲದೆ, ಅವರಿಗೆ ಅಧೀನರಾಗಿದ್ದು ಮಧ್ಯಯುಗೀನ ದಕ್ಷಿಣ ಭಾರತದ ಚರಿತ್ರೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದರು.

ವಿಜಯನಗರದ ಸ್ಥಾಪನೆಗೆ ಮೊದಲೇ ಪ್ರಬಲರಾದ ಕೆಲವು ಪಾಳೆಯಗಾರರು ಪಾಳೆಯಪಟ್ಟುಗಳನ್ನು ಕಟ್ಟಿದ್ದರೆಂಬುದು ಕರ್ನಾಟಕದ ಇತಿಹಾಸದಿಂದ ತಿಳಿಯುತ್ತದೆ. ಕ್ರಿ.ಶ. ೧೫೬೫ರಿಂದ ೧೭೯೯ರವರೆಗೆ ದಕ್ಷಿಣ ಕರ್ನಾಟಕದಲ್ಲಿ ಪಾಳೆಯಗಾರರ ಏಳ್ಗೆಯ ಕಾಲವಾಗಿತ್ತು, ವಿಜಯನಗರ ಸಾಮ್ರಾಜ್ಯದ ಪತನದ ಹೊತ್ತಿಗೆ ಕರ್ನಾಟಕದಲ್ಲಿ ಎಂಭತ್ತಕ್ಕೂ ಹೆಚ್ಚು ಪಾಳೆಯಪಟ್ಟುಗಳಿದ್ದವು. ಇವರುಗಳು ಸ್ವತಂತ್ರರಾಗಿ, ತಮ್ಮನ್ನು ನಾಯಕ, ಒಡೆಯ, ರಾಜ, ಅರಸು, ಗೌಡ ಎಂದೆಲ್ಲಾ ಕರೆದುಕೊಂಡು, ರಾಜರಂತೆ ಆಳತೊಡಗಿದರು. ಈ ಕಾಲದಲ್ಲಿದ್ದ ಪೂರ್ವ ಕರ್ನಾಟಕದ ಪಾಳೆಯಗಾರರು ಮಿಕ್ಕ ಪಾಳೆಯಗಾರರಿಗಿಂತ ಭಿನ್ನವಾಗಿದ್ದು ತಮ್ಮ ರಾಜ್ಯದ ಕೀರ್ತಿಯನ್ನು ಶಿಖರಕ್ಕೇರಿಸಿದರೆಂದರೆ ತಪ್ಪಾಗಲಾರದು. ಈ ಪಾಳೆಯಗಾರರು ವೀರವರ್ಗಕ್ಕೆ ಸೇರಿದವರು, ಪರಾಕ್ರಮಿಗಳು, ಶತ್ರುಗಳಿಗೆ ಭಯಂಕರರಾಗಿದ್ದು, ಆಶ್ರಯಿಸಿದವರನ್ನು ಕಾಪಾಡುತ್ತಿದ್ದರು.

ವಿಜಯನಗರ ಅರಸರುಗಳಿಗೆ ಕಪ್ಪವನ್ನು ಯುದ್ಧ ಕಾಲದಲ್ಲಿ ಸೈನ್ಯವನ್ನು ಒದಗಿಸುತ್ತಾ ವಿಧೇಯರಾಗಿದ್ದು, ಅವರಂತೆಯೇ ಆಡಳಿತ ಕ್ರಮವನ್ನು ಅನುಸರಿಸುತ್ತಿದ್ದರು. ಇವರು 'ಸಪ್ತಾಂಗ ಸೂತ್ರ' ಎಂದರೆ ರಾಜ, ಮಂತ್ರಿಮಡಲ, ಪ್ರಾಂತಾಡಳಿತ, ಕೋಶ, ಬಲ, ದುರ್ಗ ಹಾಗೂ

ನ್ಯಾಯಾಂಗದ ಪದ್ಧತಿಯ ಮೇರೆಗೆ ನಡೆಸಿಕೊಂಡು ಹೋಗುತ್ತಿದ್ದರು. ಅಲ್ಲದೆ ಆಡಳಿತ ಕ್ರಮ ಸುಲಭವಾಗಲು ಆಡಳಿತ ಕ್ರಮವನ್ನು ಕೇಂದ್ರಾಡಳಿತ, ರಾಜಾಡಳಿತ, ಊರಾಡಳಿತ ಹಾಗೂ ಗ್ರಾಮಾಡಳಿತಗಳೆಂದು ಮಾಡಿಕೊಂಡಿದ್ದರು.

ಪೆನ್ನಪ್ಪ ನಾಯಕನು ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಾ ಇದ್ದನು. ಅಚ್ಚುತರಾಯನ ಕಾಲದಲ್ಲಿ ಜರಿಮಲೆಯವರಿಗೆ ಅತಿ ಹೆಚ್ಚಿನ ಲಾಭವಾಯಿತು. ಚಕ್ರವರ್ತಿಗಳಿಂದ ೧೫೩೦ ಮಹಮ್ಮದ್ ಷಾಹಿ ಪಗೋಡಾ ಆದಾಯವಿರುವ ನಾಲ್ಕು ಮಾರ್ಗಗಳನ್ನು ಪಡೆದುಕೊಂಡರು. ಕೆಲ ಕಾಲಾನಂತರ "ಅಚ್ಚುತರಾಯನು ಜರಿಮಲೆಯ ಪೆನ್ನಪ್ಪ ನಾಯಕನಿಗೆ ೫೦೦ ಅಶ್ವದಳ ಮತ್ತು ೩೦೦ ಕಾಲಾಳು ಪಡೆ ಇಟ್ಟುಕೊಳ್ಳಲು ಅನುಮತಿ ನೀಡಿ ಕೇಳಿದಾಗ ಅದನ್ನು ಪೂರೈಸುವ ಷರತ್ತಿನ ಮೇರೆಗೆ ೩೫೧೫೦ ಮಹಮ್ಮದ್ ಶಾಹಿ ಪಗೋಡಾ ಆದಾಯವಿರುವ ಮತ್ತೆರಡು ಹೆಚ್ಚಿಗೆ ಮಾಗಣಿಗಳನ್ನು ನೀಡಿದನು."[೧]

ಮೂಲತಃ ಬೇಡ ಸಮುದಾಯಕ್ಕೆ ಸೇರಿದ್ದ ಈ ಮನೆತನಕ್ಕೆ ವಿಜಯನಗರದವರ ಪ್ರೋತ್ಸಾಹ ಹೆಚ್ಚಾಗಿತ್ತು. ಇವರು ತಮ್ಮ ನಿಷ್ಠೆಯನ್ನು ವಿಜಯನಗರದ ಪತನ ಹೊಂದುವವರೆಗೂ ವ್ಯಕ್ತಪಡಿಸಿದ್ದನ್ನು ನೋಡುತ್ತೇವೆ. ವಿಜಯನಗರೋತ್ತರ ಕಾಲದಲ್ಲಿ ಬದಲಾದ ರಾಜಕೀಯಕ್ಕೆ ಅನುಗುಣವಾಗಿ ಬೇರೆ ಸಂಸ್ಥಾನಗಳಂತೆ ಬಿಜಾಪುರ, ಆದಲ್‌ಶಾಹಿ ಸುಲ್ತಾನರುಗಳಿಗೆ, ನಿಜಾಮರಿಗೆ, ಹೈದರಾಲಿಗೆ ಚಿತ್ರದುರ್ಗದವರಿಗೆ ಪ್ರಕಟಿಸುತ್ತಾ ತಮ್ಮ ರಾಜ್ಯವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿದ್ದುದು ಕಂಡುಬರುತ್ತದೆ. ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ಜರಿಮಲೆ ಪಾಳೆಯಗಾರನಾದ ಪಾಪಣ್ಣ ನಾಯಕನ ನಂತರ ಅವನ ಮಗ ಪೆನ್ನಪ್ಪ ನಾಯಕನು ತನಗೆ ಬಳುವಾಗಿ ಬಂದ ಗ್ರಾಮಕ್ಕೆ ಒಡೆಯನಾದನು. "ಇವನಿಗೆ ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ದೊರೆಯಾದ ತುಳುವ ವೀರನರಸಿಂಹನು ಕ್ರಿ.ಶ. ೧೫೦೫-೧೫೦೯ರಲ್ಲಿ ಗುಡೇಕೋಟೆ ಭೂಪ ಸಮುದ್ರ ಗ್ರಾಮಗಳನ್ನು ಉಡುಗೊರೆಯಾಗಿ ನೀಡಿ ಪುರಸ್ಕರಿಸಿದನು."[೨]

ವಿಜಯನಗರ ಸಾಮ್ರಾಜ್ಯದಕ್ಕೂ ಮುಂಚಿನ ಸಂಸ್ಥಾನವಾದ ಆನೆಗೊಂದಿಯ ಪ್ರಸಿದ್ಧಿ ದೊರೆಯಾದ ಕುಮಾರರಾಮನ ವಂಶಿಕನಾದ ಭೂಮಿರಾಜನ ಮಕ್ಕಳು ಈ ಅಂಶವನ್ನು ಆಧಾರವಾಗಿಟ್ಟುಕೊಂಡು ನೋಡಿದಾಗ ಪ್ರಾಯಶಃ ಇವರೆಲ್ಲರೂ ಒಂದೇ ಮನೆತನಕ್ಕೆ ಸೇರಿದವರಾಗಿದ್ದು ವಿವಿಧ ಪ್ರಾಂತ್ಯಗಳಲ್ಲಿ ಆಳ್ವಿಕೆ ನಡೆಸುತ್ತಿದ್ದುದು ಸ್ಪಷ್ಟವಾಗುತ್ತದೆ. ಇದುವರೆಗಿನ ದಾಖಲೆಗಳನ್ನು ಪರಿಶೀಲಿಸಿದಾಗ ಜರಿಮಲೆ ಸಂಸ್ಥಾನವು ಭೂಮಿರಾಜನಿಗಿಂತ ಮೊದಲೇ ಸ್ಥಾಪಿತವಾಗಿತ್ತು ಎಂಬ ಅಂಶ ತಿಳಿಯುತ್ತದೆ. "ಕೈಫಿಯತ್ತುಗಳಲ್ಲಿರುವಂತೆ"[೩] ಜರಿಮಲೆ ಪಾಳೆಯಗಾರರಿಗೂ ಮತ್ತು ವಿಜಯನಗರ ಅರಸರಿಗೂ ಉತ್ತಮ ಸಂಬಂಧವಿತ್ತು. ಹಾಗೂ ಜರಿಮಲೆ ಪಾಳೆಯಗಾರು "ಆಂಧ್ರದ ಕದ್ರಿಯ ಪ್ರದೇಶದ ಮೂಲದವರಾದ ಇವರು ಕಾರಣಾಂತರಗಳಿಂದ ವಿಜಯನಗರಕ್ಕೆ ಬಂದು ನೆಲೆಸಿದ್ದರು."[೪] ವಿಜಯನಗರ ಸಾಮ್ರಾಜ್ಯದ

ಪ್ರಸಿದ್ಧ ಅರಸರ ಸೇವೆಯನ್ನು ಮಾಡಿಕೊಂಡಿದ್ದ ಇವರಲ್ಲಿ ಮೊದಲಿಗ "ಪಾಪಣ್ಣ ನಾಯಕನು ವೀರನರಸಿಂಹನ ಕಾಲದಲ್ಲಿ ಸೇವಕನಾಗಿ ವಿಜಯನಗರ ಸಾಮ್ರಾಜ್ಯದ ಸಾಮಂತ ಅರಸರಲ್ಲಿ ಒಬ್ಬನಾಗಿ ಮತ್ತು ನಿಷ್ಠಾವಂತ ಸೇವಕನಾಗಿ ಸೇವೆ ಸಲ್ಲಿಸುತ್ತಿದ್ದನು."[೫] "ವೀರನರಸಿಂಹನ ಪ್ರೀತಿಗೆ ಪಾತ್ರನಾಗಿದ್ದರಿಂದ ಜರಿಮಲೆ ಪಾಳೆಯಗಾರನಾದ ಪಾಪಣ್ಣ ನಾಯಕನಿಗೆ ವಡ್ಡು, ದರೋಜಿ ಗ್ರಾಮಗಳು ಬಳುವಳಿಯಾಗಿ ಬಂದವು. ಸೇವೆಗೆ ತಕ್ಕ ಪುರಸ್ಕಾರವನ್ನು ನೀಡಿದನು."[೬] ಮುಂದೆ "ಆ ಬಳುವಳಿ ಗ್ರಾಮಕ್ಕೆ ಒಡೆಯನಾಗಿ ಆಳ್ವಿಕೆ ಮಾಡಿದವನು ಪಾಪಣ್ಣ ನಾಯಕನ ಮಗ ಪೆನ್ನಪ್ಪ ನಾಯಕನಿಗೆ ಉಡುಗೊರೆಯಾಗಿ ಕೊಟ್ಟನೆಂದು ತಿಳಿದುಬರುತ್ತದೆ."[೭] "ವಿಜಯನಗರದ ಅಚ್ಚುತರಾಯನು ಜರಿಮಲೆ ಪಾಳೆಯಗಾರರಿಗೆ ಮಹಮದ್‌ಷಾಯಿ ಪಗೋಡ ಆದಾಯವಿರುವ ನಾಲ್ಕು ಮಾರ್ಗಗಳನ್ನು ಹಾಗೂ ಅಶ್ವದಳ, ಕಾಲಾಳು ಪಡೆ ಇಟ್ಟುಕೊಳ್ಳಲು ಅನುಮತಿ ನೀಡಿದನು. ಹಾಗೂ ಈ ಅನುಮತಿಯನ್ನು ಯುದ್ಧ ಕಾಲದಲ್ಲಿ ವಿಜಯನಗರದ ಅರಸರಿಗೆ ಸಹಾಯ ಮಾಡಲಿಕ್ಕಾಗಿ ಸದಾ ಸೈನ್ಯವನ್ನು ಸಿದ್ಧವಾಗಿಡಬೇಕೆಂಬ ಷರತ್ತಿನ ಮೇಲೆ ನೀಡಲಾಗಿತ್ತು."[೮] ಬಿಜಾಪುರದ ಸುಲ್ತಾನನು ವಿಜಯನಗರದ ಮೇಲೆ ದಾಳಿ ಮಾಡಿದಾಗ ಕೆಲವು ಗಡಿ ಪ್ರದೇಶದ ಪಾಳೆಯಗಾರರು, ಸಂಸ್ಥಾನಿಕರು ಅಚ್ಚುತರಾಯನಿಗೆ ವಂಚನೆ ಮಾಡಿ, ಬಿಜಾಪುರದ ಸುಲ್ತಾನನಿಗೆ ಸಹಾಯ ಮಾಡಿದರು. ಇದನ್ನು ತಿಳಿದ "ಅಚ್ಚುತರಾಯನ ಆದೇಶದಂತೆ ಪೆನ್ನಪ್ಪನಾಯಕನು ಕಣಕುಪ್ಪೆ, ಕೂಡಲಿಗಿ, ನಾರಾಯಣದೇವರ ಕೆರೆ, ಡಣಾಯಕನ ಕೆರೆ, ಸಂಡೂರು ಪ್ರದೇಶಗಳನ್ನು ಆಕ್ರಮಿಸಿ ತನ್ನದಾಗಿ ಮಾಡಿಕೊಂಡು, ಅಲ್ಲಿ ತನ್ನ ಸೇನಾಬಲವನ್ನಿಟ್ಟನು."[೯] "ಕೃಷ್ಣದೇವರಾಯನು ಕ್ರಿ.ಶ. ೧೫೧೩ರಲ್ಲಿ ಬೊಮ್ಮಂತರಾಜ ಮರಳ ಎಂಬುವವನಿಗೆ ನಾಡಿನ ತಳವಾರಿಕೆ ಜೊತೆಗೆ ಕುತ್ತನಿ, ಸಂಡೂರು, ಬಾಣರಾವಿ, ಉಜ್ಜನಿ, ಗುಡಿಕೋಟೆ, ಜರಿಮಲೆ ಮತ್ತು ವಡ್ಡು-ದರೋಜಿಗಳನ್ನು ಜಹಗೀರಿಯಾಗಿ ಕೊಟ್ಟನು."[೧೦]

"ಬೊಮ್ಮಂತರಾಜನು ಕ್ರಿ.ಶ. ೧೫೬೫ರಲ್ಲಿ ವಿಜಯನಗರದ ಪತನವಾಗಲು ಆದವಾನಿಯವರಿಗೆ ಖಂಡಣೆ ಹಣವನ್ನು ಕೊಟ್ಟು ತನ್ನ ರಾಜ್ಯವನ್ನು ಆಳುತ್ತಿದ್ದನು."[೧೧]

ಜರಿಮಲೆ ಪಾಳೆಯಗಾರನಾದ ಭೂಮಿರಾಜನು ಪ್ರಸಿದಥ ದೊರೆಯಾಗಿದ್ದನು. ಹಾಗೂ "ಭೂಮಿರಾಜನಿಗೆ ಏಳು ಜನ ಪುತ್ರರಿದ್ದುದನ್ನು ಅಂತಾಪುರ ಕೈಫಿಯತ್ತು ಮತ್ತು ದರೋಜಿ ಗ್ರಾಮದ ಕೈಫಿಯತ್ತುಗಳು ತಿಳಿಸುತ್ತವೆ."[೧೨]

ಜರಿಮಲೆಯ ಪಾಳೆಯಗಾರರು ವಿಜಯನಗರದ ಸಾಳುವ ವೀರ ನರಸಿಂಹನ ಕಾಲದಿಂದ ಟಿಪ್ಪುಸುಲ್ತಾನನವರೆಗೂ, ಎಂದರೆ ಕ್ರಿ.ಶ. ೧೪೮೫ ರಿಂದ ೧೭೮೭ರವರೆಗೆ ಬಹಳ ವೈಭವದಿಂದ ರಾಜ್ಯವಾಳಿದ್ದಾರೆ. ವಿಜಯನಗರದ ಆಗಿನ ಚಕ್ರವರ್ತಿಯಾಗಿದ್ದ ಸಾಳುವ ವೀರನರಸಿಂಹನ ಸೇವೆಗೆ ನಿಂತರು. ಇವರು ವಂಶೀಕನಾದ ಪಾಪಣ್ಣನಾಯಕನು ಚಕ್ರವರ್ತಿಯ ಸೇವಕರಲ್ಲಿ ಒಬ್ಬನಾಗಿದ್ದನು. ಚಕ್ರವರ್ತಿಯ ಜೊತೆ ಜೊತೆಗೆ ಇದ್ದು ಆತನ ವಿಶ್ವಾಸವನ್ನು ಗಳಿಸಿಕೊಂಡನು.

ಒಮ್ಮೆ ಚಕ್ರವರ್ತಿಯು ವಿಜಯನಗರದ ಸುತ್ತಲಿನ ದಂಗೆಕೋರರನ್ನು ಅಡಗಿಸಲು ಪಾಪಣ್ಣನಾಯಕನಿಗೆ ಆದೇಶವಿತ್ತನು. ತನ್ನ ಶೌರ್ಯ ಸಾಹಸಗಳ ಪ್ರದರ್ಶನಕ್ಕೆ ಸಮಯ ಕಾಯುತ್ತಿದ್ದ ನಾಯಕನು, ಈ ದಂಗೆಕೋರರನ್ನೆಲ್ಲಾ ಸದೆ ಬಡಿದನು. ಇದರಿಂದ ಸಂತೋಷಗೊಂಡ ಚಕ್ರವರ್ತಿಯು ಈತನಿಗೆ ವಡ್ಡು-ದರೋಜಿ ಗ್ರಾಮಗಳನ್ನು ಬಳುವಳಿಯಾಗಿ ಕೊಡುವನು.

೧೫ ಮತ್ತು ೧೬ನೇ ಶತಮಾನಗಳು ವಿಜಯನಗರದ ವೈಭವದ ಕಾಲವಾಗಿತ್ತು. ಆಗ ಸಣ್ಣಪುಟ್ಟ ಮಂಡಳಿಗಳು ಅಲ್ಲಲ್ಲಿ ವಿರಾಜಿಸುತ್ತಾ ಅನೇಕ ಶೂರರಾದ ಯೋಧರುಗಳು ಅವುಗಳನ್ನು ಆಳುತ್ತಾ ವಿಜಯನಗರದ ಸಾಮ್ರಾಜ್ಯಕ್ಕೆ ಆಧಾರಸ್ತಂಭದಂತಿದ್ದರು. ವಿಜಯನಗರದ ಅರಸರು ಇವರಿಗೆ ನೀಡಿದ ಪ್ರೋತ್ಸಾಹದಿಂದ ಅನೇಕ ಪಾಳೆಯಪಟ್ಟುಗಳು ಪ್ರಾಬಲ್ಯಕ್ಕೆ ಬಂದವು. ಬೃಹತ್ ಸಾಮ್ರಾಜ್ಯವಾದ ವಿಜಯನಗರವನ್ನು ಕಾನೂನು ವ್ಯವಸ್ಥೆಯ ಮೂಲಕ ನಿಯಂತ್ರಣದಲ್ಲಿಟ್ಟುಕೊಳ್ಳಲು, ಹೊಸ ರಾಜ್ಯಗಳನ್ನು ಗೆಲ್ಲಲು, ವಿಸ್ತರಿಸಲು, ಶತ್ರುಗಳೊಂದಿಗೆ ಯುದ್ಧ ಮಾಡಲು ಪಾಳೆಯಗಾರರು ಅಲ್ಲಿಯ ಅರಸರಿಗೆ ಸಹಾಯ ಮಾಡುತ್ತಿದ್ದರು. ವಿಜಯನಗರ ಸಾಮ್ರಾಜ್ಯವು ಬೃಹತ್ ಸಾಮ್ರಾಜ್ಯವಾದ್ದರಿಂದ ಅದನ್ನು ಕಾಪಾಡಿಕೊಳ್ಳಲು ಯಾವಾಗಲೂ ಜಾಗರೂಕರಾಗಿರಬೇಕಾಗಿತ್ತು. ಆದ್ದರಿಂದ ಅವರಿಗೆ ಅಲ್ಲಲ್ಲಿ ಸೈನ್ಯಗಳನ್ನು ಕಟ್ಟುವುದು ಅಗತ್ಯವಾಗಿತ್ತು. ಅರಸರಿಂದ ಮಾನ್ಯ ಪಡೆದ ಸಾಮಂತರು ಬೇರೆ ಬೇರೆ ಪ್ರಾಂತಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ನಿರ್ದಿಷ್ಟ ಪ್ರಮಾಣದ ಸೈನ್ಯವನ್ನು ಯಾವಾಗಲೂ ಸಿದ್ಧವಾಗಿಟ್ಟುಕೊಂಡಿರಬೇಕಾಗಿತ್ತು. ಅರಸರು ಯುದ್ಧದ ಸಮಯಗಳಲ್ಲಿ ಅವುಗಳನ್ನು ಬಳಸಿಕೊಳ್ಳುತ್ತಿದ್ದರು. ಇದಲ್ಲದೆ ಅವರು ಅರಸರಿಗೆ ತೆರಿಗೆಯನ್ನು ಸಂಗ್ರಹಿಸಿಕೊಡಬೇಕಾಗಿತ್ತು. ಇದಕ್ಕಾಗಿ ಅವರಿಗೆ, ಅವರ ಸೇವೆಗೆ ಅನುಗುಣವಾಗಿ ಭೂಮಿಯನ್ನು ಕೊಡಲಾಗುತ್ತಿತ್ತು.

ವಿಜಯನಗರ ಸಾಮ್ರಾಜ್ಯದಲ್ಲಿ ಇನ್ನೂರು ಜನ ಪಾಳೆಯಗಾರರು ಇದ್ದರೆಂಬುದು ತಿಳಿದುಬರುತ್ತದೆ. ಆದರೆ ಕೆಲವು ಪಾಳೆಯಗಾರರು ವಿಜಯನಗರದ ಕಾಲಕ್ಕೂ ಮುಂಚಿನಿಂದಲೇ ಸಣ್ಣ ಸಣ್ಣ ರಾಜ್ಯಗಳಲ್ಲಿ ಆಳುತ್ತಿದ್ದರೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ೧೭ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಅರವೀಡು ವಂಶದ ಪತನವಾದ ಮೇಲೆ ಎಲ್ಲಾ ಪಾಳೆಯ ಪಟ್ಟುಗಳು ಸ್ವತಂತ್ರವಾದವು. ಕರ್ನಾಟಕದಲ್ಲಿ ಹೀಗೆ ಸ್ವತಂತ್ರವಾದ ಪಾಳೆಯಪಟ್ಟುಗಳು ಅರವತ್ತಕ್ಕೂ ಹೆಚ್ಚು ಇದ್ದವು. ಅಲ್ಲದೆ ಇವರು ವಿಜಯನಗರದ ಚಕ್ರವರ್ತಿಗಳಿಂದ ಕೆಲ ಗ್ರಾಮಗಳನ್ನು ಬಳುವಳಿಯಾಗಿ ಪಡೆದುಕೊಂಡು, ನಂತರ ಆದಿಲ್‌ಶಾಹಿಗಳ ಆಳ್ವಿಕೆಗೊಳಪಟ್ಟರು. ಹಾಗೂ ಜರಿಮಲೆ ಪಾಳೆಗಾರರು ತಮ್ಮ ಉಳಿವಿಗಾಗಿ ಹರಪನಹಳ್ಳಿ, ಚಿತ್ರದುರ್ಗದವರ ಜೊತೆ ಹೋರಾಟ ಮಾಡಬೇಕಾಯಿತು. ನಂತರ ಹೈದರ್ ಅಲಿಯಿಂದ ಸಹಾಯ ಪಡೆದು ಮುಕ್ತರಾಗಿ ಟಿಪ್ಪುವಿನ ಕಾಲದಲ್ಲಿ ಪದಚ್ಯುತರಾಗಿ, ನಿಜಾಮನ ನಿಯಂತ್ರಣಕ್ಕೆ ಒಳಪಟ್ಟು ಖಂಡಣಿ ಹಣ ನೀಡಲಾಗದೆ ಕ್ರಿ.ಶ. ೧೭೦೦ರಲ್ಲಿ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿಯ ಅಧೀನಕ್ಕೆ ಒಳಗಾದರು.

ಜರಿಮಲೆ ಪಾಳೆಗಾರರು ಮೂಲತಃ ಬೇಡ ಸಮುದಾಯಕ್ಕೆ ಸೇರಿದ್ದ ಈ ಮನೆತನಕ್ಕೆ ವಿಜಯನಗರದವರ ಪ್ರೋತ್ಸಾಹ ಹೆಚ್ಚಾಗಿತ್ತು. ಇವರು ತಮ್ಮ ನಿಷ್ಠೆಯನ್ನು ವಿಜಯನಗರ ಪತನ ಹೊಂದುವವರೆಗೂ ವ್ಯಕ್ತಪಡಿಸಿದ್ದನ್ನು ನೋಡುತ್ತೇವೆ. ವಿಜಯನಗರೋತ್ತರ ಕಾಲದಲ್ಲಿ ಬದಲಾದ ರಾಜಕೀಯಕ್ಕೆ ಅನುಗುಣವಾಗಿ ಬೇರೆ ಸಂಸ್ಥಾನಗಳಂತೆ ತಮ್ಮ ರಾಜ್ಯವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿದರು. ವಿಜಯನಗರಕ್ಕೆ ಸೇರಿದ ತುಂಗಭದ್ರಾ ನದಿ ತೀರದ ದಕ್ಷಿಣ ಪ್ರದೇಶಗಳು ಅನೇಕ ಪಾಳೆಯ ಪಟ್ಟುಗಳ ಕೇಂದ್ರಗಳಾಗಿದ್ದವು. ಆ ಸಂಸ್ಥಾನಗಳು ಪರಸ್ಪರ ಯುದ್ಧನೀತಿಯನ್ನು ಕೈಗೊಂಡು ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದವು.

ಇತಿಹಾಸ ಪ್ರಸಿದ್ಧ ಹಂಪಿಯು ಹೊಸಪೇಟೆಯಿಂದ ೧೨ ಕಿ.ಮೀ. ದೂರದಲ್ಲಿ ತುಂಗಭದ್ರಾ ನದಿಯ ದಂಡೆಯಲ್ಲಿದೆ. ಉತ್ತರ ಅಕ್ಷಾಂಶ ೧೫,೧೮,೫ ರಿಂದ ೧೫.೩೧ ಮತ್ತು ರೇಖಾಂಶ ೭೮.೨೭,೫ ರಿಂದ ೭೮.೩೦ರವರೆಗಿನ ಮಧ್ಯದಲ್ಲಿ ಈ ಗ್ರಾಮ ಬರುತ್ತದೆ. ಇದು ಸುಮಾರು ೨೫ ಚ.ಕಿ.ಮೀರಷ್ಟು ವಿಸ್ತಾರವನ್ನು ಹೊಂದಿದೆ. ಹಂಪಿ ಅನೇಕ ಪುರಾಣ, ಇತಿಹಾಸ, ಪ್ರಸಿದ್ಧ ಕ್ಷೇತ್ರಗಳಿಂದ ಸುತ್ತುವರೆದಿದೆ. ಉತ್ತರಕ್ಕೆ ರಾಮಾಯಣ ಕುರುಹುಗಳಾಗಿ ಕಿಷ್ಕಿಂದೆ, ಅಂಜನಾದ್ರಿ, ದಕ್ಷಿಣಕ್ಕೆ ಮಾತಂಗ ಪರ್ವತ ಮತ್ತು ಜಂಬುನಾಥನ ಗುಡ್ಡಗಳಿವೆ. ಅಂಜನಾದ್ರಿಯಲ್ಲಿ ಹನುಮಂತನು ಜನಿಸಿದರೆ ಪಂಪಾ ಸರೋವರದ ಬಳಿ ಶಬರಿ ವಾಸವಾಗಿದ್ದಳು ಎಂಬ ಹೇಳಿಕೆಗಳಿವೆ. ಶಾಸನಗಳು ಹಂಪಿಯನ್ನು ಭಾಸ್ಕರ ಕ್ಷೇತ್ರವೆಂದು ಕರೆದಿವೆ. ಮೊದಲಿನಿಂದ ಶೈವ, ಶಾಕ್ತರ ಬಳಿಕ ವೈಷ್ಣವ, ಜೈನ ಇತ್ಯಾದಿ ಧರ್ಮಗಳ ಪ್ರದೇಶವಾಗಿ ಬೆಳೆಯುತ್ತ ಬಂದಿದೆ. ಇಲ್ಲಿ ಬೆಟ್ಟಗಳು, ದೊಡ್ಡ ಗುಂಡುಗಳಿಂದ ಕೂಡಿದ್ದು ಇವುಗಳ ಮಧ್ಯದಲ್ಲಿ ಕೋಟೆಯನ್ನು ಕಟ್ಟಲಾಗಿದೆ. ಹಂಪಿಯು ಆದಿ ಮಾನವನ ಕಾಲದಿಂದಲೂ ಜನವಸತಿಯ ಕೇಂದ್ರವಾಗಿತ್ತು. ವಿರೂಪಾಕ್ಷ ದೇವಾಲಯದ ಹಿಂಬದಿಯಲ್ಲಿ ಹಾಗೂ ಹೇಮಕೂಟದ ಪಕ್ಕದಲ್ಲಿ ಪ್ರಾಗಿತಿಹಾಸಿಕ ಕಾಲದ ಕೆಂಪು ವರ್ಣದ ಚಿತ್ರಗಳಿವೆ. ವೆಂಕಟಾಪುರದ ಬಳಿಯ ವಾಲಿ ದಿಬ್ಬವೂ ಪ್ರಾಗಿತಿಹಾಸಿಕ ಕಾಲದ ನೆಲೆಯಾಗಿದೆ.

ಹಂಪಿಯನ್ನು ಪಂಪಾಕ್ಷೇತ್ರ, ಪಂಪಾತೀರ್ಥ, ಪಂಪಾಪುರ, ಪಂಪಾಪಟ್ಟಣ ಎಂದು ಶಾಸನಗಳಲ್ಲಿ, ಪುರಾಣಗಳಲ್ಲಿ ಕರೆದಿದ್ದು ವಿಜಯನಗರದ ಸ್ಥಾಪನೆಯ ನಂತರ ಹಂಪೆ ವಿಜಯನಗರ ಪಟ್ಟಣದ ಒಂದು ಭಾಗವಾಯಿತು. ರಾಜಕೀಯವಾಗಿ ಪತನ ಹೊಂದಿ ಹಾಳಾದ ಮೇಲೆ ವಿಜಯನಗರ ಪಟ್ಟಣ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಆದರೆ ಹಂಪಿಯು ಪುಣ್ಯಕ್ಷೇತ್ರವಾಗಿ ಮುಂದುವರೆಯಿತು. ಐತಿಹಾಸಿಕವಾಗಿ ಹಂಪಿಯು ಪ್ರಾಚೀನತೆ ಏಳನೆಯ ಶತಮಾನದಷ್ಟು ಹಿಂದೆ ಹೋಗುತ್ತದೆ. ಬಾದಾಮಿ ಚಾಲುಕ್ಯರ ಕ್ರಿ.ಶ. ೬೯೧ರ ಶಾಸನದಲ್ಲಿ ಕ್ರಿ.ಶ. ೧೦೧೮ರ ನೊಳಂಬ ವಿನಯಾದಿತ್ಯನ ಬಾಗಳಿ ಶಾಸನದಲ್ಲಿ ಪಂಚಾತೀರ್ಥದ ಉಲ್ಲೇಖಗಳಿವೆ. ಕ್ರಿ.ಶ. ೧೦೫೩ರ ಶಾಸನದಲ್ಲಿ ಹಂಪಿತೀರ್ಥರ ಉಲ್ಲೇಖ ಬರುತ್ತದೆ. ಬಾದಾಮಿ ಚಾಲುಕ್ಯ, ರಾಷ್ಟ್ರಕೂಟರ ಆಳ್ವಿಕೆಗೆ ಈ ಪ್ರದೇಶ ಸೇರಿತ್ತೆಂಬ ಬಗ್ಗೆ ಯಾವುದೇ ಗೊಂದಲಗಳಿಲ್ಲವಾದರೂ ಅವರದ್ದೆಂದು

ಹೇಳಬಹುದಾದ ಶಾಸನಗಳಾವುವೂ ಹಂಪಿಯ ಪರಿಸರದಲ್ಲಿ ದೊರೆಯಲಿಲ್ಲ. ಬೇರೆ ಕಡೆ ಕಂಡುಬಂದಿರುವ ಶಾಸನಗಳಲ್ಲಿ ಪಂಪಾತೀರ್ಥ ಹಾಗೂ ಪಂಪಾತೀರದ ಉಲ್ಲೇಖಗಳಿವೆ. ಈ ಕಾಲದ ಕೆಲವು ವಾಸ್ತು ಕುರುಹುಗಳು ಹೇಮಕೂಟದ ಬೆಟ್ಟದಲ್ಲಿವೆ. ಮರಳುಗಲ್ಲಿನಲ್ಲಿ ಕಟ್ಟಿರುವ ದೇವಾಲಯ ಸಮುಚ್ಚಯದ ಭಾಗವೊಂದು ಈಗಿನ ವಿರೂಪಾಕ್ಷ ದೇವಾಲಯದ ಹಿಂಬದಿ ಮೇಲ್ಭಾಗದಲ್ಲಿದೆ. ಈಗಾಗಿ ಸು. ಕ್ರಿ.ಶ. ೮ನೇ ಶತಮಾನದವರೆಗೆ ಅವರ ಚಟುವಟಿಕೆಗಳು ಕಾಣಬರುತ್ತವೆ. ಕಲ್ಯಾಣಿ ಚಾಲುಕ್ಯರು, ನೊಳಂಬರು, ಸಿಂದರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿರುವುದು ಶಾಸನಗಳಿಂದ ವೇದ್ಯವಾಗುತ್ತದೆ. ಹೊಯ್ಸಳ ಅರಸ ಸೋಮೇಶ್ವರನು ಕ್ರಿ.ಶ. ೧೨೩೬ರ ಪಂಪಾಕ್ಷೇತ್ರದ ವಿರೂಪಾಕ್ಷನಿಗೆ ಒಂದು ಹಳ್ಳಿಯನ್ನು ದಾನ ಮಾಡಿದನು. ದ್ವಾರಸಮುದ್ರವು ಮುಸ್ಲಿಮರ ದಾಳಿಯಿಂದ ನಾಶವಾದ ಮೇಲೆ ೩ನೇ ಬಲ್ಲಾಳನು ಕ್ರಿ.ಶ. ೧೩೩೧ರಲ್ಲಿ ವಿರೂಪಾಕ್ಷ ಹೊಸದುರ್ಗದಿಂದ ಆಳುತ್ತಿದ್ದನು.

ಕ್ರಿ.ಶ. ೧೪ನೇ ಶತಮಾನದ ಆರಂಭದಲ್ಲಿ ಕುಮ್ಮಟದುರ್ಗದ ಅರಸನಾದ ಕಂಪಿಲರಾಯ ಮತ್ತು ಕುಮಾರರಾಮರು ಪ್ರಸಿದ್ಧಿಗೆ ಬಂದಿದ್ದರು. ಆಗ ಹಂಪಿ ಪ್ರದೇಶ ಸಂಪೂರ್ಣವಾಗಿ ಅವರ ಆಳ್ವಿಕೆಗೆ ಒಳಪಟ್ಟಿತ್ತೆಂಬುದು ಸ್ಪಷ್ಟವಾಗಿದೆ. ಕ್ರಿ.ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯು ಸಂಗಮ ಸಹೋದರರಾದ ಹರಿಹರ, ಬುಕ್ಕ, ಕಂಪಣ್ಣ, ಮಾರಣ್ಣ ಮತ್ತು ಮುದ್ದಪ್ಪರಿಂದಾಯಿತು. ಈ ವಂಶದ ಮೊದಲ ಅರಸರು ಮೊದಲನೆಯ ಹರಿಹರ ಮತ್ತು ಮೊದಲನೆಯ ಬುಕ್ಕ, ಆನೆಗೊಂದಿಯಿಂದ ಆಳಿದರೆಂಬ ಪ್ರತೀತಿ ಇದೆ. ಆದರೆ ಕ್ರಿ.ಶ. ೧೩೮೦ರ ಹಂಪೆಯ ಶಾಸನವು ವಿಜಯ ಎಂಬ ಹೆಸರಿನ ಪಟ್ಟಣದಲ್ಲಿ ಒಂದನೇ ಹರಿಹರ ಮತ್ತು ಬುಕ್ಕನು ಆಳುತ್ತಿದ್ದಂತೆಯೂ ಅದು ಇಂದ್ರನ ಅಮರಾವತಿಯಂತೆ ಇತ್ತೆಂದು ವರ್ಣಿತವಾಗಿದೆ. ಅಂದರೆ ಹರಿಹರ ಮತ್ತು ಬುಕ್ಕರಾಯನ ರಾಜಧಾನಿಯು ಪಂಪಾಕ್ಷೇತ್ರದ ಬಳಿಯಿದ್ದ ವಿಜಯ ಎಂಬ ಪಟ್ಟಣವೆಂದಾಯಿತು. ಈ ವಿಜಯ ವಿರೂಪಾಕ್ಷಪುರವೇ ತನ್ನ ಹೆಸರನ್ನು ಮೊಟಕು ಮಾಡಿಕೊಂಡು ವಿಜಯನಗರವಾಗಿ ಬೆಳೆಯಿತು. ಈ ವಿಜಯನಗರದಲ್ಲಿ ಸಂಗಮ, ಸಾಳ್ವ, ತುಳು ಮತ್ತು ಅರವೀಡು ವಂಶಗಳು ಸು. ೩೦೦ ವರ್ಷಗಳ ಕಾಲ ಆಳ್ವಿಕೆ ಮಾಡಿದವು. ಈ ವಂಶಗಳಲ್ಲಿ ಹರಿಹರ, ಪ್ರೌಢದೇವರಾಯ ಕೃಷ್ಣದೇವರಾಯ ಪ್ರಸಿದ್ಧ ಅರಸರು. ಈ ಅರಸರು ವಿವಿಧ ಕಾಲಘಟ್ಟದಲ್ಲಿ ಕಟ್ಟಿಸಿದ್ದ ಕೋಟೆಯ ಲಕ್ಷಣಗಳನ್ನು ಈ ಕೆಳಗಿನಂತೆ ಕಾಣಬಹುದು. ಪ್ರಾರಂಭದಲ್ಲಿ ಚಿಕ್ಕದಾಗಿದ್ದ ಪಟ್ಟಣದ ಸುತ್ತಲೂ ಕಟ್ಟಿಸಿದ್ದ ಕೋಟೆಯು ಈಗ ಒಳಕೋಟೆಯಾಗಿದೆ. ಈ ಕೋಟೆಯು ಮಹಾನವಮಿ ದಿಬ್ಬವಿರುವ ಅರಮನೆ ಪ್ರದೇಶ, ಹಜಾರರಾಮಸ್ವಾಮಿ ದೇವಾಲಯ, ರಾಣಿ ಸ್ನಾನಗೃಹ ಆನೆಸಾಲಿನ ಹಿಂದಿನ ಜೈನ ದೇವಾಲಯ ಭೂಮಿಯ ಕೆಳಮಟ್ಟದ ದೇವಾಲಯ ಮುಂತಾದ ಪ್ರದೇಶವನ್ನು ಸುತ್ತುವರೆದಿದೆ. ವಿಜಯನಗರ ಪತನಾನಂತರ ಕ್ರಿ.ಶ. ೧೬ ರಿಂದ ೧೮ನೇ ಶತಮಾನದವರೆಗೆ ಪಾಳೆಯಗಾರರು ಪ್ರಬಲರಾಗಿ ರಾಜ್ಯವಾಳಿದರು. ಈ ಅವಧಿಯಲ್ಲಿ ಹತ್ತಾರು ಕೋಟೆಗಳು ನಿರ್ಮಾಣವಾಗಿವೆ. ಇವುಗಳಲ್ಲಿ ಹೆಚ್ಚು ಗಿರಿದುರ್ಗಗಳಿವೆ.

ಪಾಳೆಯಗಾರರ ಕೋಟೆಗಳ ರಚನಾಕ್ರಮದಲ್ಲಿ ಬದಲಾವಣೆಗೊಂಡಿವೆ. ಕಾರಣ ಆರ್ಥಿಕವಾಗಿ ಇವರು ಪ್ರಬಲರಾಗಿದ್ದಿಲ್ಲ. ಜರಿಮಲೆ ಪಾಳೆಯಗಾರರ ಕೋಟೆಗಳು ಆಕಾರದಲ್ಲಿ ದೊಡ್ಡದಿದ್ದು ಪ್ರಬಲವಾಗಿವೆ. ಇನ್ನುಳಿದ ಪಾಳೆಯಗಾರರ ಕೋಟೆಗಳು ಸಾಧಾರಣವಾಗಿವೆ. ಪಾಳೆಯಗಾರರ ಕೋಟೆಗಳಲ್ಲಿ ಹಿಂದೂ-ಮುಸ್ಲಿಂ ಮಿಶ್ರ ಶೈಲಿಯನ್ನು ಗುರುತಿಸಬಹುದು. ವಿಜಯನಗರ ಸಾಮ್ರಾಜ್ಯವು ಹಿಂದೂ ಧರ್ಮದ ಸಂಸ್ಕೃತಿಯ ರಕ್ಷಾಯಂತ್ರವಾಗಿ ಕ್ರಿ.ಶ. ೧೩೩೬ರಲ್ಲಿ ಸಂಗಮ ಮನೆತನದ ಹರಿಹರನಿಂದ ಸ್ಥಾಪಿಸಲ್ಪಟ್ಟಿತ್ತು. ವಿಜಯನಗರ ಸಾಮ್ರಾಜ್ಯದ ಬಗ್ಗೆ ತಿಳಿಯಲು ನಮಗೆ ವಿಪುಲವಾದ ಆಧಾರಗಳಿವೆ. ನೂರಾರು ಶಾಸನಗಳು, ನಾಣ್ಯಗಳು, ವಿದೇಶಿ ಪ್ರವಾಸಿಗರ ಬರಹಗಳು, ಸ್ಮಾರಕಗಳು, ಅಸಂಖ್ಯಾತ ಗ್ರಂಥಗಳು ದೊರೆತಿವೆ, ದೊರಕುತ್ತಿವೆ. ಈ ಸಾಮ್ರಾಜ್ಯವನ್ನು ಕ್ರಿ.ಶ. ೧೩೩೬-೧೫೬೫ರವರೆಗೆ ನಾಲ್ಕು ವಂಶದವರು ಆಳಿದವರು ಆಳಿದರು. ಸಂಗಮ ವಂಶ, ಸಾಳುವ ವಂಶ, ತುಳುವಂಶ ಮತ್ತು ಅರವೀಡು ವಂಶ ವಿಜಯನಗರ ಸಾಮ್ರಾಜ್ಯದ ಕಾಲವನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದುದು. ಏಕೆಂದರೆ ಈ ಸಾಮ್ರಾಜ್ಯ ಹಿಂದೂ ಧರ್ಮ ಮತ್ತು ಸಂಸ್ಕೃತಿಗಳನ್ನು ರಕ್ಷಿಸಿ ಊರ್ಜಿತಗೊಳಿಸಿದ್ದಲ್ಲದೆ ತನ್ನ ಗಡಿಯನ್ನು ವಿಸ್ತರಿಸಿತು.

ತುಳುವ ವಂಶದ ಕೃಷ್ಣದೇವರಾಯನ ಕಾಲದಲ್ಲಿ ವಿಜಯಗರ ಸಾಮ್ರಾಜ್ಯ ತನ್ನ ವೈಭವದ ಶಿಖರವನ್ನೇರಿತು. ಅವನು ಅನೇಕ ದಿಗ್ವಿಜಯಗಳನ್ನು ಮಾಡಿದನು. ಸರ್ವಧರ್ಮಗಳನ್ನು ಸಮನಾಗಿ ಕಂಡು ಎಲ್ಲಾ ಧರ್ಮಗಳಿಗೂ ಆಶ್ರಯವಿತ್ತಿದನು. ಕಲೆ, ಸಾಹಿತ್ಯಗಳು ಇವನ ಪ್ರೋತ್ಸಾಹದಲ್ಲಿ ಊರ್ಜಿತಗೊಂಡವು. ಇವನ ಕಾಲದಲ್ಲಿ ವಿಜಯಗರ ಸಾಮ್ರಾಜ್ಯವು ಉತ್ತರದಲ್ಲಿ ಕೃಷ್ಣಾ-ಗೋದಾವರಿ, ದಕ್ಷಿಣದಲ್ಲಿ ಕನ್ಯಾಕುಮಾರಿ, ಪೂರ್ವದಲ್ಲಿ ಬಂಗಾಳಕೊಲ್ಲಿ ಮತ್ತು ಪಶ್ಚಿಮದಲ್ಲಿ ಅರಬ್ಬಿ ಸಮುದ್ರದವರೆಗೆ ಹಬ್ಬಿತ್ತು.

ಒಟ್ಟಿನಲ್ಲಿ ಹೇಳುವುದೇನೆಂದರೆ ಗೋದಾವರಿ ನದಿಯ ದಕ್ಷಿಣಕ್ಕಿರುವ ದಕ್ಷಿಣ ಭಾರತವೆಲ್ಲಾ ಏಕಛತ್ರದ ಆಡಳಿತದಲ್ಲಿತ್ತು. ವಿಜಯನಗರ ವೈಭವದ ಕಾಲದಲ್ಲಿ ಸಣ್ಣ ಸಣ್ಣ ಮಂಡಳಿಗಳು ವಿಜಯನಗರ ಸಾಮ್ರಾಜ್ಯಕ್ಕೆ ಆಧಾರಸ್ತಂಭಗಳಾಗಿದ್ದವು. ಇವರಿಗೆ ನೀಡಿದ ಪ್ರೋತ್ಸಾಹದಿಂದ ಅನೇಕ ಪಾಳೆಯಪಟ್ಟುಗಳು ಅಸ್ತಿತ್ವಕ್ಕೆ ಬಂದವು. ಹಲವಾರು ಸಾಮಂತರೂ ಕೆಲವು ಬೇಡ ಯೋಧರೂ ಇವುಗಳನ್ನು ಆಳುತ್ತಿದ್ದರು. ಇವರು ವಿಜಯನಗರ ಸಾಮ್ರಾಜ್ಯದ ಪತನಾನಂತರ ಸ್ವತಂತ್ರರಾಗಿ ಪಾಳೆಯಗಾರರಾದರು. ಕರ್ನಾಟಕದಲ್ಲಿ ಅನೇಕ ಪಾಳೆಯಗಾರರು ಆಳಿದರು. ಅವರಲ್ಲಿ ಜರಿಮಲೆ ಪಾಳೆಯಗಾರರು ಒಬ್ಬರೆಂದು ಹೇಳಬಹುದು. ಅನೇಕ ಸಣ್ಣಪುಟ್ಟ ಪಾಳೆಯಪಟ್ಟುಗಳು ಇದ್ದವು. ಕೆಲವು ನಶಿಸಿ ಹೋದರೆ ಇನ್ನು ಕೆಲವು ದೊಡ್ಡ ಪಾಳೆಯಪಟ್ಟುಗಳೊಂದಿಗೆ ವಿಲೀನವಾದವು. ಕೆಲವು ಪಾಳೆಯಗಾರರು ಕೀರ್ತಿವಂತರಾದರು. ಹೈದರಾಲಿ, ಟಿಪ್ಪುಸುಲ್ತಾನ್, ಮರಾಠ ಹಾಗೂ ಇಂಗ್ಲೀಷರನ್ನು ಧೈರ್ಯವಾಗಿ ಎದುರಿಸಿ ತಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಇಂತಹ ಕರ್ನಾಟಕದ ಪಾಳೆಯಗಾರರು ಚರಿತ್ರೆಯನ್ನು ತಿಳಿಯಬಹುದು.

ಆಡಳಿತದ ಸೌಕರ್ಯಕ್ಕಾಗಿ ವಿಜಯನಗರದ ಅರಸರು ತಮ್ಮ ಸಾಮ್ರಾಜ್ಯದ ಕೆಲವು ಪ್ರದೇಶಗಳಿಗೆ ಸಮರ್ಥರಾದ ಅಧಿಕಾರಿಗಳನ್ನು ನಿಯಮಿಸಿದರು. ಕ್ರಮೇಣ ಈ ಅಧಿಕಾರಿಗಳು 'ಪಾಳೆಯಗಾರರು' ಎಂದು ಹೆಸರಾದರು. ಇವರು ತಮಗೆ ಸೇರಿದ ಪಾಳೆಯಪಟ್ಟುಗಳಲ್ಲಿ ಕಂದಾಯವನ್ನು ವಸೂಲು ಮಾಡುತ್ತಿದ್ದರು. ಸೈನ್ಯವನ್ನು ಕಟ್ಟಿ ತರಬೇತಿ ಕೊಡುತ್ತಿದ್ದರು. ವಿಜಯನಗರದ ಅರಸರಿಗೆ ವಿಧೇಯರಾಗಿರುತ್ತಿದ್ದರು. ವಿಜಯನಗರ ಸಾಮ್ರಾಜ್ಯ ಪತನವಾದ ಮೇಲೆ ಕರ್ನಾಟಕದ ಪೂರ್ವಭಾಗದಲ್ಲಿಯ ಬಳ್ಳಾರಿ, ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಗಳಲ್ಲಿಯ ಪಾಳೆಯಗಾರರೂ ಸ್ವತಂತ್ರರಾದರು. ಈ ಮೂರು ಜಿಲ್ಲೆಗಳಲ್ಲಿ ಒಟ್ಟು ಸುಮಾರು ಮೂವತ್ತು ಪಾಳೆಯಪಟ್ಟುಗಳು ಇದ್ದವು. ಇವುಗಳಲ್ಲಿ ಸಣ್ಣದಾದ, ದುರ್ಬಲವಾದ ಪಾಳೆಯಪಟ್ಟುಗಳು ಎರಡು ಮೂರು ತಲೆಮಾರುಗಳ ನಂತರ ಹೇಳ ಹೆಸರಿಲ್ಲದಂತೆ ಹೋದರೆ, ಇನ್ನೂ ಕೆಲವು ದೊಡ್ಡದಾದ ಸಶಕ್ತವಾದ ಪಾಳೆಯಪಟ್ಟುಗಳಲ್ಲಿ ವಿಲೀನವಾಗಿ ಹೋದವು. ಕೊನೆಗೆ ದೃಢವಾಗಿ ಉಳಿದ ಪಾಳೆಯಪಟ್ಟುಗಳು ಒಟ್ಟು ಏಳು ಎಂದು ಹೇಳಬಹುದು.

ವಿಜಯನಗರ ಸಾಮ್ರಾಜ್ಯದ ನಂತರ ಉತ್ತರ ಕರ್ನಾಟಕವು ಬಳ್ಳಾರಿಯವರೆಗೆ ಬಿಜಾಪುರದ ಸುಲ್ತಾನ ಒಂದನೇ ಅಲಿ ಆದಿಲ್‌ಷಾನ ಆಳ್ವಿಕೆಗೆ ಸೇರಿಕೊಂಡಿತು. ಕೃಷ್ಣದೇವರಾಯನು ಕ್ರಿ.ಶ. ೧೫೧೩ರಲ್ಲಿ ಬೊಮ್ಮಂತರಾಜ ಮರಳ ಎಂಬುವವನಿಗೆ ನಾಡಿನ ತಳವಾರಿಕೆ ಜೊತೆಗೆ ಕುತ್ತನಿ, ಸಂಡೂರು, ಬಾಣರಾವಿ, ಉಜ್ಜನಿ, ಗುಡೆಕೋಟೆ, ಜರಿಮಲೆ ಮತ್ತು ವಡ್ಡು-ದರೋಜಿಗಳನ್ನು ಜಹಗೀರಾಗಿ ಕೊಟ್ಟನು.

ಹೊಯ್ಸಳ ಸಾಮ್ರಾಜ್ಯವು ಪತನ ಹೊಂದಿದ ತರುವಾಯ ಹಿಂದೂಧರ್ಮ ರಕ್ಷಣೆಗೆಂದು ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು "ಮರೆತು ಹೋದ ಹಾಗೂ ಎಂದೆಂದೂ ಮರೆಯಲಾರದ ಮಹಾ ಸಾಮ್ರಾಜ್ಯವೆಂದು" ಇತಿಹಾಸಕಾರ ಕರೆದಿದ್ದಾರೆ. ೧೪ನೇ ಶತಮಾನದ ೪ನೇ ದಶಕದಲ್ಲಿ ಹುಟ್ಟಿ ಹದಿನಾರನೆಯ ಶತಮಾನದ ೬ನೆಯ ದಶಕದಲ್ಲಿ ಅಸ್ತಂಗತವಾದ ವಿಜಯನಗರವು ಈ ಅವಧಿಯಲ್ಲಿ ಭಾರತದಲ್ಲಿ ಮಾತ್ರವಲ್ಲದೆ, ಪ್ರಪಂಚದಲ್ಲಿಯೇ ಖ್ಯಾತಿ ಪಡೆದಿತ್ತು. ದೇಶಿಯ ಮತ್ತು ವಿದೇಶಿಯ ಲೇಖಕರು ಇತಿಹಾಸಕಾರರು, ಪ್ರಪಂಚದಲ್ಲಿಯೇ ಖ್ಯಾತಿ ಪಡೆದಿತ್ತು. ದೇಶಿಯ ಮತ್ತು ವಿದೇಶಿಯ ಲೇಖಕರು ಇತಿಹಾಸಕಾರರು, ಪ್ರವಾಸಿಗರು, ವರ್ತಕರು ಇವರೇ ಮೊದಲಾದವರು ವಿಜಯನಗರದ ಭವ್ಯತೆಯನ್ನು ಮನಸಾರೆ ಕೊಂಡಾಡಿದ್ದಾರೆ. ಕ್ರಿ.ಶ. ೧೩೩೬ ರಿಂದ ೧೫೬೫ರವರೆಗೆ ಆಳ್ವಿಕೆ ನಡೆಸಿದ ವಿಜಯನಗರ ಅರಸರು ಜಿಲ್ಲೆಯನ್ನು ತಮ್ಮ ಸಾಮ್ರಾಜ್ಯದ ಭಾಗವನ್ನಾಗಿಸಿಕೊಂಡು ಆಳಿದರು. ಕ್ರಿ.ಶ. ೧೩೫೪ರಿಂದ ಅಳಿಯ ರಾಮರಾಯರ ಕಾಲದವರೆಗೆ ಆಳಿದ ವಿಜಯನಗರ ಅರಸರ ಶಾಸನಗಳು ಈ ಜಿಲ್ಲೆಯಲ್ಲಿ ಸಿಕ್ಕಿವೆ. ಈ ಶಾಸನಗಳು ಈ ಜಿಲ್ಲೆಯಲ್ಲಿದ್ದ ವಿಜಯನಗರದ ಆಡಳಿತ ಪದ್ಧತಿಯನ್ನು ಸೂಚಿಸುತ್ತದೆ.

ಸುವ್ಯವಸ್ಥಿತವಾದ ಹಾಗೂ ಕ್ರಮಬದ್ಧವಾದ ಆಡಳಿತವನ್ನು ಏರ್ಪಡಿಸುವುದರ ಜೊತೆಗೆ ವಿಜಯನಗರದ ಅರಸರ ಈ ಜಿಲ್ಲೆಯ ಕೃಷಿ ಅಭಿವೃದ್ಧಿಗೆ ಬೇಕಾದ ಕಾಮಗಾರಿ ಕೆಲಸಗಳನ್ನು

ಕೈಗೊಂಡರು. ಕೃಷಿಯೇ ಪ್ರಧಾನವಾಗಿದ್ದ ಈ ಕಾಲದಲ್ಲಿ ಇದೊಂದು ಮಹತ್ತರವಾದ ಪುಣ್ಯ ಕಾರ್ಯವೆಂದು ಭಾವಿಸಿದ್ದರೆ ಆಶ್ಚರ್ಯವಿಲ್ಲ. ಸರ್ಕಾರದ ಮಂತ್ರಿಗಳು ಮತ್ತು ದಂಡನಾಯಕರು ಈ ದಿಶೆಯಲ್ಲಿ ಉತ್ಸಾಹವಹಿಸಿ ಪ್ರಜಾಕ್ಷೇಮಕ್ಕಾಗಿ ಕೆಲಸ ಕೈಗೊಳ್ಳುತ್ತಿದ್ದರು. ಇದಲ್ಲದೆ "ತೆರಿಗೆಗಳು" ಭಾರ ಜಾಸ್ತಿ ಎಂದು ಕಂಡುಬಂದಾಗ ಸರ್ಕಾರ ಭಾರವನ್ನು ಇಳಿಸುವ ಕಾರ್ಯವನ್ನು ಮಾಡುತ್ತಿತ್ತು. ಹಿಂದೂ ಧರ್ಮದ ರಕ್ಷಣೆ ಮತ್ತು ಪೋಷಣೆ, ವಿಸ್ತರಣೆ ವಿಜಯಗರ ಸ್ಥಾಪಕರ ಮುಖ್ಯವಾದ ಧ್ಯೇಯವಾಗಿತ್ತು. ಈ ಧ್ಯೇಯವನ್ನು ವಿಜಯನಗರದ ಎಲ್ಲಾ ಅರಸರು ಅನುಷ್ಠಾನಕ್ಕೆ ತಂದರು. ಅನೇಕ ಕಡೆ ಅಗ್ರಹಾರಗಳನ್ನು ಸ್ಥಾಪಿಸುವ ಮೂಲಕ ದೇವಸ್ಥಾನಗಳನ್ನು ಕಟ್ಟಿಸುವುದರ ಮೂಲಕ ಬ್ರಾಹ್ಮಣರಿಗೆ ದಾನ-ದತ್ತಿಗಳನ್ನು ನೀಡಿ ಹಿಂದೂ ಧರ್ಮದ ರಕ್ಷಣೆ ಹಾಗೂ ಪೋಷಣೆಯನ್ನು ವಿಜಯನಗರದ ಅರಸರು ಕೈಗೊಂಡರು.

ವಿಜಯನಗರ ಕಾಲದಲ್ಲಿ ಈ ಜಿಲ್ಲೆಯಲ್ಲಿ ಸ್ಥಳೀಯ ಸಂಸ್ಥೆಗಳು ಜೀವಂತವಾಗಿದ್ದವು. ಅಗ್ರಹಾರ ಮತ್ತು ಮಹಾನಾಡು ಎಂಬ ಸ್ಥಳೀಯ ಸಂಸ್ಥೆಗಳು ಈ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದ್ದವೆಂಬುದಕ್ಕೆ ಶಾಸನಗಳ ಆಧಾರವಿದೆ. ಅಗ್ರಹಾರದ ಜನರು ತಮ್ಮ ಸ್ಥಳೀಯ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುತ್ತಿದ್ದರು. ವ್ಯವಸಾಯ ಅಭಿವೃದ್ಧಿಗೆ ಗಮನ ಕೊಡುತ್ತಿದ್ದರು. ಕೃಷಿ ಉತ್ಪನ್ನದ ಪಾಲನ ಭಾಗವನ್ನು ನಿರ್ಧರಿಸುತ್ತಿದ್ದರು. ಮಹಾನಾಡು ಅನೇಕ ಗ್ರಾಮಗಳನ್ನೊಳಗೊಂಡ ಸ್ಥಳೀಯ ಸಂಸ್ಥೆಯಾಗಿತ್ತು. ೧೫ನೇ ಶತಮಾನದಲ್ಲಿ ಪಾಳೆಯಗಾರರು ತಲೆ ಎತ್ತಿದ ಮೇಲೆ ವಿಜಯಗರ ಪರೋಕ್ಷ ಆಡಳಿತವು ಇಲ್ಲಿ ಆರಂಭವಾಯಿತೆಂದು ಹೇಳಬಹುದು. ಅಂತಹ ಪಾಳೆಯಗಾರರಲ್ಲಿ ಬಳ್ಳಾರಿ, ಕುರುಗೋಡು, ಕೂಡ್ಲಿಗಿ, ಜರಿಮಲೆ, ಗಡೇಕೋಟೆ, ಹರಪನಹಳ್ಳಿ, ಚಿತ್ರದುರ್ಗ, ತುಮಕೂರು, ಹರತಿ, ಹಟ್ಟಿ ಮತ್ತಿನಾಡು ನಾಯಕರು ಮುಖ್ಯರು. ವಿಜಯನಗರದ ಅರಸರೇ ಇಂತಹ ಪಾಳೆಯಗಾರರನ್ನು ಸೃಷ್ಟಿಸಿದರು. ಈ ಪಾಳೆಯಗಾರರಿಗೆ ಅಮರನಾಯಕರೆಂಬ ಹೆಸರಿತ್ತು.

ಊಳಿಗಮಾನ್ಯ ಪದ್ಧತಿಯ ಆಧಾರದ ಮೇಲೆ ಈ ಜಿಲ್ಲೆಯ ಅನೇಕ ಪ್ರದೇಶಗಳನ್ನು ಇಂತಹ ಅಮರನಾಯಕರಿಗೆ ಕೊಡಲಾಗಿದ್ದಿತು. ಇದಕ್ಕೆ ಬದಲಾಗಿ ಅಮರನಾಯಕರು, ವಿಜಯನಗರ ಸಾಮ್ರಾಜ್ಯಕ್ಕೆ ಸೈನಿಕ ಸೇವೆಯನ್ನು ಸಲ್ಲಿಸಬೇಕಿತ್ತು. ನಿಗದಿ ಪಡಿಸಿದ ಸೇನೆಯನ್ನು ಸಿದ್ಧವಾಗಿ ಇಟ್ಟುಕೊಳ್ಳಬೇಕಾಗಿದ್ದಿತು. ದಂಡಯಾತ್ರೆಯ ಸಮಯದಲ್ಲಿ ವಿಜಯನಗರ ಅರಸರಿಗೆ ನೆರವು ನೀಡಬೇಕಾಯಿತು. ಸಾಮಂತರ ಮೂಲ ಸಾಮ್ರಾಜ್ಯದ ಇಂತಹ ಆಡಳಿತ ಪದ್ಧತಿಗೆ "ನಾಯಂಕರ ಪದ್ಧತಿ" ಎಂದು ಹೆಸರಾಯಿತು. ಇದರ ಪ್ರಕಾರ ಸಾಮ್ರಾಜ್ಯವನ್ನು ಭೂಮಿಗೆಲ್ಲಾ ಒಡೆಯ, ಅವನು ತನ್ನ ಆಶ್ರಿತರಿಗೆ ಭೂಮಿಯನ್ನು ಹಂಚುತ್ತಿದ್ದನು. ಹೀಗೆ ರಾಜನಿಂದ ಭೂಮಿಯನ್ನು ಪಡೆದವರನ್ನು ನಾಯಕರೆನ್ನಲಾಗುತ್ತಿತ್ತು. ವಿಜಯನಗರವು ಅಚ್ಯುತರಾಯನ ಕಾಲದಲ್ಲಿ ೨೦೦ಕ್ಕಿಂತ ಹೆಚ್ಚು ನಾಯಕರಿಗೆ ಭಾಗ ಮಾಡಲ್ಪಟ್ಟಿತ್ತೆಂದು ತಿಳಿಯುವುದು ಅಲ್ಲದೇ ಭೂಮಿಯೆಲ್ಲಾ ರಾಜನಿಗೆ ಸೇರಿತ್ತೆಂದು ಮತ್ತು ಅವನ ನಾಯಕರು ಪಡೆಯುತ್ತಿದ್ದರೆಂದು ತಿಳಿಯುತ್ತದೆ. ಜರಿಮಲೆ

ಪಾಳೆಯಗಾರರು ವಿಜಯನಗರ ಕಾಲದಲ್ಲಿ ಆ ಸಾಮ್ರಾಜ್ಯದ ಭಾಗವಾಗಿದ್ದು ಅದರ ಆಸೆ-ಆಕಾಂಕ್ಷೆಗಳನ್ನು ಪೂರೈಸುವ ಬಹುಮುಖ್ಯವಾದ ಘಟಕವಾಗಿತ್ತು. ವಿಜಯನಗರ ಅರಸರು ಪರಂಪರೆಯಿಂದ ಬಂದಿದ್ದ ಆಡಳಿತ ಸಂಪ್ರದಾಯಕ್ಕೆ ತಮ್ಮದೇ ಆದ ಮೆರುಗನ್ನು ಕೊಟ್ಟರು. ಪ್ರಜಾಕ್ಷೇಮ ಮತ್ತು ಹಿಂದೂ ಧರ್ಮದ ರಕ್ಷಣೆ ವಿಜಯನಗರದ ಆಡಳಿತ ಪ್ರಮುಖ ಧ್ಯೇಯಗಳಾಗಿದ್ದು, ಅವು ಈ ಜಿಲ್ಲೆಯಲ್ಲಿ ಆಳಿದ ಇತರ ಪಾಳೆಯಗಾರರೂ ವಿಜಯನಗರ ಸಾಮ್ರಾಜ್ಯದ ಶಕ್ತಿಗೆ ಬೆಂಬಲವಾಗಿ ನಿಂತಿದ್ದರು. ಅವರ ಪರಂಪರೆಯಲ್ಲೇ ಸಾಗಿದರು. ವಿಜಯನಗರ ಪ್ರಬಲವಾಗಿರುವಷ್ಟು ಕಾಲ ಅವರ ಸಾರ್ವಭೌಮಾಧಿಕಾರಕ್ಕೆ ಈ ಜಿಲ್ಲೆಯ ಪಾಳೆಯಗಾರರು ತಲೆ ಭಾಗಿ ನಡೆದರು. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯವು ನಾಶವಾದಾಗ ಈ ಜರಿಮಲೆಯನ್ನು ಆಳುತ್ತಿದ್ದ ಪಾಳೆಯಗಾರರಲ್ಲಿ ಪ್ರಬಲರಾದ ಜರಿಮಲೆ ಪಾಳೆಯಗಾರರು ಸರ್ವಸ್ವತಂತ್ರರಾದರು.

ವಿಜಯನಗರ ಸಾಮ್ರಾಜ್ಯದ ಪತನ ನಂತರ ಕರ್ನಾಟಕದಲ್ಲಿ ಪ್ರಬಲರಾದವರು ಪಾಳೆಯಗಾರರು. ವಿಜಯನಗರದ ಅರಸರು ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿ ಅದಕ್ಕೆ ಸೇರಿದ ನಾನಾ ಭಾಗಗಳ ಮೇಲೆ ನೇರವಾಗಿ ಆಳ್ವಿಕೆ ನಡೆಸುವುದು ಕಷ್ಟವೆಂದು ಕಂಡುಬಂದಾಗ ಆಯಾ ಪ್ರದೇಶಗಳ ಆಡಳಿತ ಉಸ್ತುವಾರಿ ನೋಡಿಕೊಳ್ಳುವ ಕಂದಾಯ ವಸೂಲಿ ಮಾಡಲು, ಶಾಂತಿ ಸುವ್ಯವಸ್ಥೆ ಕಾಪಾಡಲು, ಯುದ್ಧ ಸಮಯದಲ್ಲಿ ಸಹಾಯ ಮಾಡಲು ಇವೇ ಮೊದಲಾದ ಉದ್ದೇಶಗಳಿಗಾಗಿ ಕೆಲವು ಬಲಿಷ್ಠ ಹಾಗೂ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಸಾಮಂತ ಅಧಿಕಾರಿಗಳೇ ಪಾಳೆಯಗಾರರೆನಿಸಿದರು. ಪಾಳೆಯಗಾರರು ಶೌರ್ಯ, ಸಾಹಸಗಳಿಗೆ ಹೆಸರಾಗಿದ್ದರು. ಆದರೆ ಅವರಲ್ಲಿ ಅನೇಕರು ದರೋಡೆಕೋರರೆಂತಲೂ, ಸುಲಿಗೆಕೋರರೆಂತಲೂ ಕುಖ್ಯಾತಿ ಪಡೆದವರು. ಅವರು ಶಸ್ತ್ರಸಜ್ಜಿತರಾಗಿ ಅರಣ್ಯಗಳಲ್ಲೂ, ಗುಡ್ಡಗಳಲ್ಲೂ ಸಂಚರಿಸುತ್ತಾ ಗ್ರಾಮಗಳನ್ನು ಲೂಟಿ ಮಾಡುತ್ತಾ ಸಾಮಾನ್ಯರಿಗೆ ಸಿಂಹಸ್ವಪ್ನರಾಗಿದ್ದರು. ಸಾಹಸ ಕಾರ್ಯಗಳು ಅವರಿಗೆ ಪ್ರಿಯವಾಗಿದ್ದರಿಂದ ಅವರು ಯುದ್ಧ ಕಲೆಯಲ್ಲಿ ಪಳಗಿದವರಾಗಿದ್ದರು. ಪಾಳೆಯಗಾರರು ತಮ್ಮ ಪ್ರದೇಶದಲ್ಲಿ ಬಿಗಿಯಾದ ಕಾನೂನುಗಳನ್ನು ಜಾರಿಗೊಳಿಸುವುದರ ಮೂಲಕ ಅನೇಕ ಹುಟ್ಟುವಳಿಯ ಪಾಲನ್ನು ಪಡೆಯುವ ಮೂಲಕ ತಮ್ಮ ಅಧಿಕಾರದ ಪ್ರಭಾವವನ್ನು ಉಪಯೋಗಿಸುತ್ತಿದ್ದರು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಳ್ಳುವ ಮೊದಲೇ ಕೆಲವು ಪಾಳೆಯಪಟ್ಟುಗಳು ಅಸ್ತಿತ್ವದಲ್ಲಿದ್ದವು. ಆದರೆ ಬಹಳಷ್ಟು ಮಂದಿ ಪಾಳೆಯಗಾರರು ಉದಯವಾದದ್ದು ವಿಜಯನಗರ ಅರಸರ ಆಡಳಿತ ಅವಧಿಯಲ್ಲಿ ಮಾತ್ರ. ಜರಿಮಲೆ ಪಾಳೆಯಗಾರರ ರಾಜ್ಯಾಡಳಿತ ಪದ್ಧತಿಯು ವಿಜಯನಗರದ ಆಡಳಿತ ವಿಧಾನವನ್ನು ಹೋಲುತ್ತಿತ್ತು. ಜರಿಮಲೆ ಪಾಳೆಯಪಟ್ಟಿಗೆ ಸೇರಿದ ಗ್ರಾಮಗಳನ್ನು ಹಲವಾರು 'ಪಟ್ಟಡಿ'ಗಳಾಗಿ ವಿಭಾಗಿಸಿ ಪ್ರತಿಯೊಂದು ಗ್ರಾಮದಲ್ಲೂ ಗೌಡ, ತಳವಾರ, ಆಯಾಗಾರ ಇವರೇ ಮೊದಲಾದವರನ್ನು ನೇಮಿಸುತ್ತಿದ್ದರು. ಈ ಗ್ರಾಮಗಳ ಮೇಲೆ

ಶ್ಯಾನುಭೋಗನ ಅಧಿಕಾರವಿತ್ತು. ಪ್ರತಿಯೊಂದು ನೇಮ ಅಥವಾ ಪಟ್ಟಡಿಗಳ ಆಡಳಿತವು ಪಾರುಪತ್ತೆಗಾರ, ನಾಡಗೌಡ, ನಾಯಕ, ದಳವಾಯಿ, ಪಾಳೆಯಗಾರ, ಗೌಡ, ಶ್ಯಾನುಭೋಗರ ಕೈಯಲ್ಲಿತ್ತು. ಆಡಳಿತ ನಿರ್ವಹಣೆ ಕಷ್ಟವೆಂದು ತಮ್ಮ ಹುದ್ದೆಯನ್ನು ಇತರರಿಗೆ ವಹಿಸಿಕೊಡುವ ಪದ್ಧತಿ ಇತ್ತು.

ಈ ಎಲ್ಲಾ ಪಾಳೆಯಗಾರರ ಇತಿಹಾಸವನ್ನು ಕುರಿತು ಆಳವಾಗಿ ಅಧ್ಯಯನ ನಡೆಸಿದಾಗ ಅಂದಿನ ಸಮಾಜದ ನಾನಾ ಮುಖಗಳ ಪರಿಚಯ ನಮಗಾಗುತ್ತದೆ. ಟಿಪ್ಪು, ಹೈದರಾಲಿಯವರ ಕಾರ್ಯಾಚರಣೆಯಿಂದ ಈ ಪಾಳೆಯಗಾರರು ಬಹುಬೇಗ ಮೂಲೆಗುಂಪಾದರು. ಆದರೆ ಅವನ ಈ ಕಾರ್ಯದಿಂದ ಆದ ಲಾಭವೆಂದರೆ ಭವಿಷ್ಯದಲ್ಲಿ ಈ ಎಲ್ಲಾ ಸಂಸ್ಥಾನಗಳು ಒಂದು ಬಲಿಷ್ಠ ಪ್ರಭುತ್ವದ ಅಡಿಯಲ್ಲಿ ಒಂದು ಗೂಡುವಂತಾಯಿತು. ಜರಿಮಲೆ ಪಾಳೆಯಗಾರರ ಚರಿತ್ರೆಗೆ, ಕರ್ನಾಟಕದ ಕೈಫಿಯತ್ತುಗಳು (ಬಳ್ಳಾರಿ) ಚಂದ್ರವಳ್ಳಿ, ಮೈಸೂರು ಸ್ಟೇಟ್ ಗೆಜೆಟಿಯರ್ಸ್, ಮೆಕೆಂಜಿಯು ಸಂಗ್ರಹಿಸಿರುವ ಜರಿಮಲೆ ಸಂಸ್ಥಾನದ ವಂಶಾವಳಿ ಹಾಗೂ ಮನ್ರೋನ ರಿಪೋರ್ಟುಗಳೇ ಮುಖ್ಯ ಆಧಾರಗಳು. ಆದರೆ ಈ ಎಲ್ಲಾ ಆಧಾರಗಳಲ್ಲಿ ಕೊಟ್ಟಿರುವ ಪ್ರತಿಯೊಬ್ಬ ಪಾಳೆಯಗಾರನು ಆಳಿದ ಕಾಲ, ಒಂದಕ್ಕೊಂದು ಮೇಳೈಸುವುದಿಲ್ಲ. ಜರಿಮಲೆ ಪಾಳೆಯಗಾರರು ವಿಜಯನಗರದ ೨ನೇ ವಂಶವಾದ ಸಾಳುವ ವೀರನರಸಿಂಹನ ಕಾಲದಿಂದ ಮೈಸೂರಿನ ಸಾಮ್ರಾಜ್ಯದ ಅಧಿಪತಿಗಳಾದ ಹೈದರಾಲಿ ಮತ್ತು ಮೈಸೂರು ಹುಲಿ ಟಿಪ್ಪುಸುಲ್ತಾನನವರೆಗೆ ಎಂದರೆ ಸುಮಾರು ವರ್ಷಗಳವರೆಗೆ ಅಂದರೆ ಕಾಲಮಾನ ಕ್ರಿ.ಶ. ೧೪೮೫ ರಿಂದ ೧೭೮೭ರವರೆಗೆ ಸುಮಾರು ೩೦೦ ವರ್ಷಗಳ ಕಾಲ ಬಹಳ ವೀರತ್ವ, ಶೂರತ್ವ, ಬಹಳ ಸ್ನೇಹಪೂರ್ವಕವಾಗಿ, ದಕ್ಷತೆಯಿಂದ, ಹಲವಾರು ಪಾಳೆಯಗಾರರು ಅಂದರೆ ಹರಪನಹಳ್ಳಿ ಪಾಳೆಯಗಾರರಿಂದ, ಚಿತ್ರದುರ್ಗದ ಪಾಳೆಯಗಾರರಿಂದ, ಉತ್ತಮ ಸ್ನೇಹಬಾಂಧವ್ಯದಿಂದ ಹಾಗೂ ವೈವಾಹಿಕ ಸಂಬಂಧದಿಂದ ಅಲ್ಲದೆ ಇತರ ಸ್ಥಳೀಯ ಪಾಳೆಯಗಾರರಿಂದ ಉತ್ತಮವಾದ ದಕ್ಷ ಆಡಳಿತದಿಂದ ಬಹಳ ವರ್ಷಗಳವರೆಗೆ ವಿಜಯನಗರ ಅರಸರ ಹಾಗೆ ಅವರ ಕ್ರಮಬದ್ಧ ಆಡಳಿತದ ಅಂಶಗಳಿಂದ ಪ್ರೇರಿತರಾಗಿ ಬಹಳ ವೈಭವದಿಂದ ಜರಿಮಲೆ ಪಾಳೆಯಗಾರರು ಆಳ್ವಿಕೆ ಮಾಡಿದ್ದಾರೆ.

ಕಾಡು–ಕಣಿವೆಗಳನ್ನು ತಾಣವಾಗಿಸಿಕೊಂಡು, ಬೇಟೆಯ ಉಪಜೀವನವನ್ನು ರೂಢಿಸಿಕೊಂಡ ಬೇಡ ನಾಯಕರು ಮೂಲತಃ ಕ್ಷತ್ರಿಯ ಕುಲಕ್ಕೆ ಸೇರಿದವರು. ಸಾಹಸ ಶೌರ್ಯಕ್ಕೆ ಹೆಸರಾದ ಈ ಬೇಡ ಜನಾಂಗವನ್ನು ಕರ್ನಾಟಕದ ರಾಜರು ತಮ್ಮ ಸೈನ್ಯದಲ್ಲಿ ಸೇರಿಸಿಕೊಂಡರು. ಯುದ್ಧ ಪ್ರೇಮಿಗಳಾದ ಇವರು ಬಹುಬೇಗ ಸೈನ್ಯದಲ್ಲಿ ಉನ್ನತ ಸ್ಥಾನಮಾನ ಸಂಪಾದಿಸಿದರು.

ವಿಜಯನಗರ ಅರಸರ ಕಾಲದಲ್ಲಿ ಬಹಳಷ್ಟು ಪಾಳೆಯಗಾರರು ತಲೆ ಎತ್ತಿದರು. ವಿಜಯನಗರದ ಅರಸರು ವಿಸ್ತಾರವಾದ ಸಾಮ್ರಾಜ್ಯಕ್ಕೆ ಸೇರಿದ ನಾನಾ ಭಾಗದ ಆಳ್ವಿಕೆಯನ್ನು ತಾವೇ ನೇರವಾಗಿ ಮಾಡುವುದು ಕಷ್ಟವಾದಾಗ ಆಯಾ ಪ್ರದೇಶಗಳ ಆಡಳಿತ ಉಸ್ತುವಾರಿ ಕಂದಾಯ ವಸೂಲಿ, ಶಾಂತಿ ಸುವ್ಯವಸ್ಥೆ ಕಾಪಾಡಲು ಅಧಿಕಾರಿಗಳನ್ನು ನೇಮಿಸುತ್ತಿದ್ದರು.

ಅವರೇ ಕ್ರಮೇಣದಲ್ಲಿ ಪಾಳೆಯಗಾರರೆನಿಸಿಕೊಂಡರು. ಇವರೇ ವಿಜಯನಗರ ಸಾಮ್ರಾಜ್ಯದ ಗಟ್ಟಿ ತಳಪಾಯಗಳಾದರು. ಇವರಿಂದಲೇ ವಿಜಯನಗರ ಸಾಮ್ರಾಜ್ಯವು ವಿಸ್ತಾರಗೊಳ್ಳಲು ಸಾಧ್ಯವಾಯಿತು. ಹೀಗಾಗಿ ವಿಜಯನಗರ ಸಾಮ್ರಾಜ್ಯವು ಪಾಳೆಯಗಾರರ ಒಂದು ಒಕ್ಕೂಟವೇ ಆಗಿತ್ತು ಎನ್ನಬಹುದು. ವಿಜಯನಗರದ ಅರಸರು ದುರ್ಬಲರಾದಂತೆ ಬೆನ್ನೆಲುಬಾಗಿ ನಿಂತಿದ್ದ ಇವರು ಕ್ರಿ.ಶ. ೧೫೬೫ರ ತಾಳೀಕೋಟೆ ಕದನದಲ್ಲಿ ತಮ್ಮ ಧೈರ್ಯ ಸಾಹಸಗಳನ್ನು ಮೆರೆದರು. ಆದರೆ ವಿಜಯನಗರ ಸಾಮ್ರಾಜ್ಯಕ್ಕೆ ಕೆಲವು ಕಾರಣಗಳಿಂದ ಸೋಲುಂಟಾಯಿತು. ಕ್ರಿ.ಶ. ೧೫೬೫ರ ನಂತರ ಬಹುತೇಕವಾಗಿ ವಿಜಯನಗರ ಅಧೀನದ ಪಾಳೆಯಗಾರರು ಸ್ವತಂತ್ರರಾದರು. ಅವರಲ್ಲಿ ಬೇಡ ಸಂಸ್ಥಾನಗಳೇ ಅಧಿಕವಾಗಿವೆ. ಹೀಗಾಗಿ ವಿಜಯನಗರೋತ್ತರ ಕಾಲೀನ ಕರ್ನಾಟಕದ ಇತಿಹಾಸವನ್ನು ಬೇಡರ ಇತಿಹಾಸವೆಂದು ಕರೆಯಲಾಗಿದೆ. ನಾಯಕ ಜನಾಂಗದವರು, ಪಾಳೆಯಗಾರರಾಗಿ, ಸಂಸ್ಥಾನಿಕರಾಗಿ, ಅರಸರಾಗಿ ಅತ್ಯಂತ ಸಮರ್ಥವಾಗಿ ರಾಜ್ಯಭಾರ ಮಾಡಿದ್ದಾರೆ. ಕರ್ನಾಟಕ ಇತಿಹಾಸವನ್ನು ಅಭ್ಯಸಿಸುವಾಗ ಬರೀ ರಾಜಮನೆತನಗಳನ್ನು ಗಮನಿಸಿದರೆ ಸಾಲದು, ಅದರ ಜೊತೆಗೆ ಈ ರಾಜಮನೆತನಗಳ ಅಡಿಯಲ್ಲಿರುವ ಸಮ ಅರಸು ಮನೆತನಗಳನ್ನು ಗಮನಿಸಿದಾಗ ಮಾತ್ರ ಇತಿಹಾಸದ ಅಧ್ಯಯನ ಪೂರ್ಣವಾಗುತ್ತದೆ.

ಏಕೆಂದರೆ ನಾಡು, ನುಡಿ ರಕ್ಷಣೆಯಲ್ಲಿ ಇವರ ಪಾತ್ರ ಬಹುದೊಡ್ಡದು. ದೊಡ್ಡ ಕಟ್ಟಡಕ್ಕೆ ಅದು ಬೀಳದಂತೆ ಸಣ್ಣ ಕಲ್ಲುಗಳಾಗಿ ಈ ಅರಸು ಮನೆತನಗಳು ಶ್ಲಾಘನೀಯವಾದ ಕಾರ್ಯವನ್ನು ಮಾಡಿದವು. ವಿಜಯನಗರ ಸಾಮ್ರಾಜ್ಯ ಪತನಾನಂತರ ಬಿಜಾಪುರ ಆದಿಲ್‌ಶಾಹಿಗಳು ತುಂಗಭದ್ರ ನದಿಯಾಚೆಗಿನ ದಕ್ಷಿಣದ ಬಹು ಪ್ರದೇಶಗಳನ್ನು ತಮ್ಮ ಹತೋಟಿಗೆ ತೆಗೆದುಕೊಂಡರು. ಕೇಂದ್ರಾಡಳಿತದ ಅಧಿಕಾರದ ತೆಕ್ಕೆ ಆದಿಲ್‌ಶಾಹಿಗಳಾದರೂ ಸ್ಥಳೀಯ ಮಟ್ಟದ ವ್ಯವಹಾರವೆಲ್ಲ ಸ್ಥಾನೀಕರ ಸೇನಾಧಿಕಾರಿಗಳ, ಊರ ಗೌಡರ ಹಿಡಿತದಲ್ಲೇ ಇತ್ತು. ಕರ್ನಾಟಕ ರಾಜಕೀಯ ಇತಿಹಾಸ ಒಂದು ರೀತಿಯಲ್ಲಿ ರಾಜರುಗಳ ಇತಿಹಾಸವಾಗಿ ಕಾಣುತ್ತದೆ. ದೊಡ್ಡ ದೊಡ್ಡ ಅರಸು ಮನೆತನಗಳು, ಅವುಗಳಲ್ಲಿ ಪ್ರಸಿದ್ಧ ರಾಜರುಗಳು ಈ ನಾಡಿನ ರಾಜಕೀಯ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿದ್ದಾರೆ ಎಂಬುದು ನಿಜ. ಆದರೆ ಇದು ರಾಜಕೀಯ ಇತಿಹಾಸದ ಪೂರ್ಣ ಚಿತ್ರವಲ್ಲ. ದೊಡ್ಡ ಸಾಮ್ರಾಜ್ಯಗಳು ಅಸ್ತಿತ್ವದಲ್ಲಿರುವಾಗಲೇ ಚಿಕ್ಕ ಚಿಕ್ಕ ಸಂಸ್ಥಾನಗಳು, ಸಾಮಂತ ರಾಜರುಗಳು ಮತ್ತು ಆಯಾ ಸಂಸ್ಥಾನಗಳ ಪಾಳೆಯಗಾರರು ಕೂಡ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಕಂಗೊಳಿಸುತ್ತಾರೆ. ಹಾಗೆ ನೋಡಿದರೆ ದೊಡ್ಡ ಸಾಮ್ರಾಜ್ಯ ಮತ್ತು ಅಲ್ಲಿನ ಚಕ್ರವರ್ತಿಗಳಿಗಿಂತ ಸ್ಥಳೀಯ ಸಂಸ್ಥಾನಗಳ ಪಾಳೆಯಗಾರರೇ ಆಯಾ ಪ್ರದೇಶದ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಜೀವನವು ರೂಪುಗೊಳ್ಳಲು ಹೆಚ್ಚು ಶ್ರಮಿಸಿದ್ದಾರೆ. ಈ ದೃಷ್ಟಿಯಿಂದ ಕರ್ನಾಟಕದ ರಾಜಕೀಯ ಇತಿಹಾಸವನ್ನು ಅಧ್ಯಯನ ಮಾಡುವಾಗ ಸ್ಥಳೀಯ ಸಂಸ್ಥಾನಗಳ ಬಗೆಗೆ ತಿಳಿದುಕೊಳ್ಳುವುದು ಅಗತ್ಯವಾಗಿದೆ. ಕರ್ನಾಟಕ ಇತಿಹಾಸದಲ್ಲಿ ರಾಜಕೀಯ ಚರಿತ್ರೆಯಲ್ಲಿ ವಿಜಯನಗರದ್ದು ಸುವರ್ಣ ಇತಿಹಾಸವಾಗಿದೆ. ಪ್ರಾಚೀನ ಕರ್ನಾಟಕದ

ರಾಜಕೀಯ ಮತ್ತು ಸಾಂಸ್ಕೃತಿಕ ಹಿರಿಮೆಯನ್ನು ಹೊತ್ತು ನಿಂತಿದ್ದ ಪ್ರಮುಖ ಸಾಮ್ರಾಜ್ಯಗಳಲ್ಲಿ ವಿಜಯನಗರ ಒಂದಾಗಿತ್ತು. ವಿಶಾಲವಾದ ಈ ಸಾಮ್ರಾಜ್ಯದಲ್ಲಿ ಹಲವಾರು ಪಾಳೆಯಗಾರಿಕಾ ರಾಜ್ಯಗಳು ಅಸ್ತಿತ್ವದಲ್ಲಿದ್ದವು.

ವಿಜಯನಗರ ಸಾಮ್ರಾಜ್ಯ ಪತನವಾದ ನಂತರ ಕರ್ನಾಟಕದಲ್ಲಿ ಒಂದು ಕೇಂದ್ರ ಸರಕಾರವಿಲ್ಲದೆ ಭಾರತೀಯರ ಧರ್ಮ, ಭಾಷೆ ಮತ್ತು ಸಂಸ್ಕೃತಿಗಳು ನಾಶವಾಗುತ್ತಿರುವ ಕಠಿಣ ಪರಿಸ್ಥಿತಿಯಲ್ಲಿ ಅವುಗಳನ್ನು ರಕ್ಷಿಸಲೆಂದೇ ಅನೇಕ ಸಣ್ಣ ಪುಟ್ಟ ದೇಸೀಗತಿ ನಾಡಗೌಡಕಿ ಮೊದಲಾದ ದೇಶಿಯ ಸಂಸ್ಥಾನಗಳು ಹುಟ್ಟಿಕೊಂಡವು. ಈ ಸಂಸ್ಥಾನಗಳು ಬಿಜಾಪುರದ ಆದಿಲ್‌ಶಾಹಿ, ಹೈದರಾಬಾದಿನ ನಿಜಾಮ್ ಮತ್ತು ಬ್ರಿಟೀಷರ ಅಂಕತದಲ್ಲಿದ್ದುಕೊಂಡು ಹಿಂದೂ ಧರ್ಮ, ಸಾಹಿತ್ಯ, ಸಂಸ್ಕೃತಿಗಳನ್ನು ಕಾಪಾಡಿಕೊಂಡು ಬಂದವು. ಕನ್ನಡ ಭಾಷೆ, ಸಂಸ್ಕೃತಿಗಳು ಇವರ ಆಶ್ರಯದಲ್ಲಿ ಬೆಳೆದು ಪ್ರಬುದ್ಧಮಾನಕ್ಕೆ ಬಂದವು. ದೇಸಗತಿಯ ದರ್ಬಾರ್ ದೌಲತ್ತು, ಯುದ್ಧ, ವಿಲಾಸಗಳ ಪರಿಭ್ರಮಣದ ಜೀವನದಲ್ಲಿಯೂ ಸಂಸ್ಥಾನಗಳು ನಾಡಿನ ಸಂಸ್ಕೃತಿಯನ್ನು ಪೋಷಿಸಿಕೊಂಡು ಬರುವಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸಿರುವುವು.

ಸಂಸ್ಥಾನದ ಕೆಲವು ರಾಜರು ಪ್ರಜಾರಂಜಕರಾಗಿ ಪ್ರಜೆಗಳ ಪ್ರೀತಿಗೆ ಪಾತ್ರರಾದರೆ ಇನ್ನೂ ಕೆಲವರು ಪ್ರಜಾಪೀಡಕರಾಗಿ ಪ್ರಜೆಗಳಿಂದ ಪ್ರತಿಭಟನೆ ಬಂಡಾಯಗಳಂಥ ವಿರೋಧವನ್ನು ಅನುಭವಿಸಿದರು. ಸಂಸ್ಥಾನದ ರಾಜರ ಪತ್ನಿಯರ ನಡವಳಿಕೆಗಳು ಪತಿಗಳ ಜೀವನ ಶೈಲಿಗಿಂತ ಭಿನ್ನವಾಗಿರುತ್ತಿರಲಿಲ್ಲ. ಅಧಿಕಾರ ದರ್ಪ, ಭೋಗವಿಲಾಸದ ಸುಖ, ಸಂಪತ್ತಿನ ವೈಭವದ ಮೋಜಗಳನ್ನು ರಾಣಿಯರು ಅನುಭವಿಸುತ್ತಿದ್ದರು. ಪಾಳೆಯಗಾರರು ಒಬ್ಬರಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿರುತ್ತಿದ್ದರು. ತಮ್ಮ ರಾಣಿಯರು ಸುಖವಾಗಿರಲೆಂದು ಅವರ ರಾಣಿಯರಿಗೆ ಅಂತಃಪುರದಲ್ಲಿ ಸಕರ ಸೌಕರ್ಯಗಳನ್ನು ಒದಗಿಸುತ್ತಿದ್ದರು. ಹತ್ತು ವರ್ಷದ ಬಾಲಕರನ್ನು ಬಿಟ್ಟರೆ ಮತ್ತಾರು ರಾಣಿಯರನ್ನು ನೋಡುವುದಕ್ಕೆ ಅವಕಾಶವಿರುತ್ತಿರಲಿಲ್ಲ. ರಾಣಿ ವಾಸದಲ್ಲಿಯೂ ಅವರು ಪೋಷಾಪದ್ಧತಿಯಲ್ಲಿರುತ್ತಿದ್ದರು. ರಾಣಿಯರು ತಮ್ಮ ಪತಿಗಳ ಮೇಲೆ ವಿಶಿಷ್ಟ ಪ್ರಭಾವವನ್ನು ಬೀರಿ ರಾಜ್ಯಾಡಳಿತದಲ್ಲಿ ಪತಿಗಿಂತ ತಮ್ಮ ಅಧಿಕಾರವನ್ನು ಉಪಯೋಗಿಸಿ ದರ್ಪಿಷ್ಟರಾಗಿ ಮೆರೆದವರಿದ್ದಾರೆ. ಕೆಲವರು ಆಡಳಿತ ಸೂತ್ರವನ್ನು ತಾವು ವಹಿಸಿ, ರಾಜ್ಯದ ಆಡಳಿತದಲ್ಲಿ ತಮ್ಮ ಛಾಪನ್ನು ಮೂಡಿಸಿದ್ದಾರೆ. ಇದಕ್ಕೆ ಭಿನ್ನವಾಗಿ ಕೆಲವು ರಾಣಿಯರು ಅಧಿಕಾರದ ಬದುಕಿಗೆ ವಿಮುಖರಾಗಿ ಸಮಾಜಮುಖಿಗಳಾಗಿ ಜೀವನವನ್ನು ಸವಿಸಿ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಬಲವರ್ಧನೆಗಾಗಿ ಪರಿಶ್ರಮಿಸಿದ ಧರ್ಮಿಷ್ಠ ರಾಣಿಯರು ಇದ್ದಾರೆ. ಗುರುಗಳಿಂದ ದೀಕ್ಷೆ ಪಡೆದು ಯಾವ ಜೀವನ ಸದಾ ದಾಸೋಹ, ವಿದ್ಯಾಭಿವೃದ್ಧಿ, ಜನಪರ ಕಲ್ಯಾಣ ಕಾರ್ಯಗಳಲ್ಲಿ ಅರ್ಪಿಸಿಕೊಂಡು ಸಾತ್ವಿಕ ಜೀವನಗೈದು ರಾಣಿಯರು ಆಗಿ ಹೋಗಿ ನಾಡಿಗೆ ಆದರ್ಶ ಪ್ರಾಯರಾಗಿದ್ದಾರೆ. ಹೀಗೆ ಕನ್ನಡ ನಾಡಿನಲ್ಲಿ ಹುಟ್ಟಿಕೊಂಡು ಪ್ರವರ್ಧಮಾನವಾದ ಪಾಳೆಯಗಾರರ ಮನೆತನಗಳು ನಮ್ಮ ಭಾಷೆ ಸಾಹಿತ್ಯ ಮತ್ತು ಸಂಸ್ಕೃತಿಗಳ ಜೋಪಾಸನರಾಗಿ ವಹಿಸಿದ

ಕಾರ್ಯ ಅನನ್ಯ. ಪಾಳೆಯಗಾರರ ಮನೆತನಗಳು ತಮ್ಮ ಪರಾಕ್ರಮ, ಪೌರುಷಗಳಿಗೆ ಹಾಗೂ ಸಂಸ್ಕೃತಿಯ ಸಂವರ್ಧನೆಗೆ ಪ್ರಸಿದ್ಧವಾಗಿವೆ. ತಮ್ಮ ಆಡಳಿತ ಅಧಿಕಾರ ನಡೆಸುವುದರ ಜೊತೆಗೆ ಧರ್ಮ, ಸಾಹಿತ್ಯ, ಸಂಸ್ಕೃತಿ ಮತ್ತು ಶಿಕ್ಷಣದ ಪ್ರಸಾರಗಳಿಗಾಗಿ ಅವು ಅನುಪಮ ಕೊಡುಗೆಯನ್ನು ನೀಡಿವೆ.

ವಿಜಯನಗರಕ್ಕೆ ಸೇರಿದ ತುಂಗಭದ್ರಾ ನದಿ ತೀರದ ದಕ್ಷಿಣ ಪ್ರದೇಶಗಳು ಅನೇಕ ಪಾಳೆಯ ಪಟ್ಟುಗಳ ಕೇಂದ್ರಗಳಾಗಿದ್ದವು. ಆ ಸಂಸ್ಥಾನಗಳು ಪರಸ್ಪರ ಯುದ್ಧ ನೀತಿಯನ್ನು ಕೈಗೊಂಡು ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದವು. ಅಷ್ಟೇನೂ ಬಲಾಢ್ಯವಲ್ಲದ ಈ ಸಂಸ್ಥಾನಗಳ ಮೇಲೆ ಆದಿಲ್‌ಶಾಹಿ ವಜೀರನಾಗಿದ್ದ ಸಿದ್ಧಿ ಮಸೂದ್‌ಖಾನನ ದೃಷ್ಟಿ ಬಿತ್ತು. ಪಾಳೆಯಗಾರರು ಮೂಲತಃ ವಿಜಯನಗರದ ಅಧೀನ ಮಾಂಡಲಿಕರಾಗಿದ್ದರಿಂದ ವಿಜಯನಗರದ ಆಡಳಿತ ಪದ್ಧತಿಯನ್ನು ಅನುಸರಿಸಿದರು. ಅರಸನನ್ನು ನಾಯಕ, ದೊರೆ ಎಂದು ಕರೆಯಲಾಗುತ್ತಿತ್ತು. ಅರಸನು ರಾಜ್ಯದ ಸರ್ವೋಚ್ಚ ವ್ಯಕ್ತಿಯಾಗಿದ್ದನು. ನಾಯಕರು ಫಾಳೆಯಗಾರರಾದರೂ ಅವರ ಪ್ರಭುತ್ವ ಪ್ರಬಲವಾಗಿದ್ದಿತು. ಅವರು ತಮ್ಮನ್ನು ಶ್ರೀಮನ್ ಮಹಾನಾಯಕಚಾರ್ಯ, ನಾಯಕ ಶಿರೋಮಣಿ ಎಂದು ಕರೆದುಕೊಂಡಿದ್ದಾರೆ. ಅರಸನಿಗೆ ಉತ್ಸವ, ಬಾಹ್ಯ ಸಂಚಾರದ ಸಮಯದಲ್ಲಿ ಗೌರವ, ಅಧಿಕಾರ ಸೂಚಕವಾದ ಛತ್ರ, ಚಾಮರ, ಫತಾಕೆಗಳನ್ನು ಹಿಡಿಯಲಾಗುತ್ತಿತ್ತು. ಹಿಂದೂ ಆಡಳಿತ ಪದ್ಧತಿಯಂತೆ ಅರಸೊತ್ತಿಗೆಯು ತಂದೆಯಿಂದ ಹಿರಿಯ ಮಗನಿಗೆ ವರ್ಗಾವಣೆ ಗೊಳ್ಳುತ್ತಿತ್ತು. ನಆಯಕರು ಬಲಿಷ್ಠವಾದ ಸೈನ್ಯವನ್ನು ವಿಜಯನಗರ ಸಾಮ್ರಾಜ್ಯದ ಸಹಾಯದಿಂದ ಸಂಘಟಿಸಿದ್ದರು. ಸೈನ್ಯದಲ್ಲಿ ಕಾಲ್ದಳ, ಅಶ್ವದಳ ಎಂಬ ಎರಡು ಪಡೆಗಳಿದ್ದವು. ಹೀಗೆ ವಿಜಯನಗರ ಸಾಮ್ರಾಜ್ಯಕ್ಕೂ ಪಾಳೆಯಗಾರರಿಗೂ ಅವಿನಾಭಾವ ಸಂಬಂಧವನ್ನು ಕಾಣಬಹುದು.

**ಅಡಿಟಿಪ್ಪಣಿ**

೧. ಕೊಟ್ರೇಶ್ ಎಂ. ಕಲ್ಯಾಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಮತ್ತು ಮೆಕೆಂಜಿಯ ಹಸ್ತಪ್ರತಿ (೧೮೦೨) ಪುಟ–೫೭.

೨. ಅದೇ ಪುಟ–೫೬

೩. ಕಲಬುರ್ಗಿ ಎಂ.ಎಂ. (ಸಂ), ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪುಟ–೪೦೬.

೪. ಯೋಗೀಶ್ವರಪ್ಪ ಡಿ.ಎನ್., ಜರಿಮಲೆ ನಾಯಕರು, ಕನ್ನಡ ಸಾಹಿತ್ಯ ಪರಿಷತ್, ೨೦೦೨, ಪುಟ–೩೭.

೫. ಅದೇ, ಪುಟ–೩೧, ೪೭.

೬. ಅದೇ, ಪುಟ–೩೪.

೭. ಕೊಟ್ರೇಶ್ ಎಂ., ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧, ಮತ್ತು ಮೆಕೆಂಜಿಯ ಹಸ್ತಪ್ರತಿ (೧೮೦೨), ಪುಟ–೪೪.

೮. ಮೇಜರ್ ಥಾಮಸ್ ಮನ್ರೋನ ವರದಿಯ ದಾಖಲೆಯಾದ ''Memorandms of the cedded Districts'' ಎಂಬ ಶೀರ್ಷಿಕೆಯಿರುವ ದಾಖಲೆ, ೧೮೦೨.

೯. ಶ್ಯಾಮಲಾ ಸಿ.ಆರ್., ಪೂರ್ವಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷಥ್, ಬೆಂಗಳೂರು, ೨೦೦೮, ಪುಟ–೨೮.

೧೦. ಅದೇ, ಪುಟ–೨೩.

೧೧. ಅದೇ, ಪುಟ–೨೩.

೧೨. ಕರ್ನಾಟಕ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪುಟ–೨೮.



# ಅಧ್ಯಾಯ : ಮೂರು

# ಜರಿಮಲೆ ಪಾಳೆಯಗಾರರು

೩.೧. ರಾಜಕೀಯ ವ್ಯವಸ್ಥೆ
೩.೨. ಆರ್ಥಿಕ ವ್ಯವಸ್ಥೆ
೩.೩. ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳು
೩.೪. ನ್ಯಾಯಾಡಳಿತ ವ್ಯವಸ್ಥೆ
೩.೫. ಜರಿಮಲೆ ಪಾಳೆಯಗಾರರ ಇತ್ತೀಚಿನ ವಂಶೀಕರು

# ಅಧ್ಯಾಯ : ಮೂರು

## ಜರಿಮಲೆ ಪಾಳೆಯಗಾರರು (ಕ್ರಿ.ಶ. ೧೫೦೦-೧೮೦೦)

**ಎ. ರಾಜಕೀಯ ವ್ಯವಸ್ಥೆ**

**ಬಿ. ಆರ್ಥಿಕ ವ್ಯವಸ್ಥೆ**

**ಸಿ. ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳು**

**ಡಿ. ನ್ಯಾಯಾಡಳಿತ**

ವಿಜಯನಗರ ಪತನವಾದ ನಂತರ ಕರ್ನಾಟಕದಲ್ಲಿ ಹಲವಾರು ಪಾಳೆಯಗಾರರು ಮನೆತನಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಜರಿಮಲೆಯ ಪಾಳೆಯಗಾರರ ಮನೆತನವೂ ಒಂದು. ಇದು ಕೂಡ್ಲಿಗಿಯಿಂದ ಆಗ್ನೇಯಕ್ಕೆ ೧೪ ಕಿ.ಮೀ. ದೂರದಲ್ಲಿದೆ. ಪುಟ್ಟ ಗ್ರಾಮವಾಗಿರುವ ಜರಿಮಲೆ ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿತು. ವಿಜಯನಗರದ ತರುವಾಯ ಈ ಪ್ರದೇಶವನ್ನು ಸ್ಥಳೀಯ ಬೇಡ ನಾಯಕರು ರಾಜ್ಯ ಸ್ಥಾಪನೆ ಆಳತೊಡಗಿದರು.

ಪಾಳೆಯಪಟ್ಟಿನ ಸ್ಥಾಪನೆ ಜರಿಮಲೆ ಪಾಳೆಯಗಾರರ ಮೂಲ ಪುರುಷರ ಬಗ್ಗೆ ಏಕರೂಪದ ಮಾಹಿತಿ ಆಕರಗಳಿಲ್ಲ. ದಂತಕತೆ, ಪುರಾಣ, ಪ್ರತೀತಿ, ನಂಬಿಕೆಗಳಲ್ಲಿ ಜೀವಂತವಾಗಿದ್ದರೂ ಬ್ರಿಟೀಷರ ದಾಖಲೆಗಳು ಅಲ್ಪವಾಗಿ ಜರಿಮಲೆಯ ಬಗ್ಗೆ ಬೆಳಕು ಚೆಲ್ಲುತ್ತವೆ. ಹಾಗೆ ಪ್ರೊ. ಲಕ್ಷ್ಮಣ್ ತೆಲಗಾವಿಯವರು ಸಂಪಾದಿಸಿದ ಹಸ್ತಪ್ರತಿಯಲ್ಲಿ ಸ್ವಲ್ಪ ಮಾಹಿತಿ ದೊರೆಯುತ್ತದೆ. ಉಳಿದಂತೆ ಈ ಪಾಳೆಯಗಾರರ ಆಳ್ವಿಕೆಯನ್ನು ಸ್ಮಾರಕಗಳೇ ಪ್ರತಿನಿಧಿಸುತ್ತವೆ.

ಜರಿಮಲೆ ಗ್ರಾಮವು ಕೂಡ್ಲಿಗಿ ತಾಲ್ಲೂಕಿನಲ್ಲಿದ್ದು, ಇದು ತಾಲ್ಲೂಕು ಕೇಂದ್ರದಿಂದ ನೈರುತ್ಯಕ್ಕೆ ೧೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಪೂರ್ವ ದಿಕ್ಕಿಗೆ ಕೋಟೆಯನ್ನು ಒಳಗೊಂಡ ಬೆಟ್ಟವಿದೆ. ಈ ಬೆಟ್ಟವು ಸಮುದ್ರ ಮಟ್ಟದಿಂದ ೨೭೫೦ ಅಡಿ ಎತ್ತರವಿದ್ದು, ಸುತ್ತಲಿನ ಪ್ರದೇಶಕ್ಕೆ ೩೦೦ ಅಡಿ ಎತ್ತರವಿದೆ. ಬೆಟ್ಟದ ಸುತ್ತಲೂ ಹಾಗೂ ಬೆಟ್ಟದ ಮೇಲಿರುವ ಕೋಟೆಯು ಶಿಥಿಲವಾಗಿದ್ದು ಅದರ ಅಳಿದುಳಿದ ಭಾಗಗಳ ಸಹಾಯದಿಂದ ಕೋಟೆಯ ಲಕ್ಷಣ ಹಾಗೂ

ಮಹತ್ವವನ್ನು ಕೆಳಗೆ ಚರ್ಚಿಸಲಾಗಿದೆ. ಈ ಚರ್ಚೆಗೆ ಪರಿಕರಗಳೆಂದರೆ ಸ್ಥಳೀಯರ ಹೇಳಿಕೆಗಳು, 'ಕೈಫಿಯತ್ತುಗಳು,'[೧] 'ಜರಿಮಲೆ ಪಾಳೆಯಗಾರರು'[೨], 'ಲೇಖನಗಳು'[೩] ಮುಖ್ಯವಾಗಿವೆ. ದುರಾದೃಷ್ಟವೆಂದರೆ ಜರಿಮಲೆ ಪಾಳೆಯಗಾರರ ಶಾಸನಗಳಾವುವು ಲಭ್ಯವಾಗದಿರುವುದು.

ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕು, ಗುಡೇಕೋಟೆ ಹೋಬಳಿಯಲ್ಲಿರುವ ಒಂದು ಸಾಮಾನ್ಯ ಹಳ್ಳಿ ಈ ಜರಿಮಲೆ. ನೈಸರ್ಗಿಕವಾಗಿ ಇದು ಗುಡ್ಡಗಳಿಂದ ಆವೃತವಾದ ಪ್ರದೇಶ ಕೂಡ್ಲಿಗಿ ತಾಲ್ಲೂಕಿನಲ್ಲಿ ಕಂಡುಬರುವ ಎರಡು ಬೆಟ್ಟ ಸಾಲುಗಳಲ್ಲಿ ಒಂದನ್ನು ಕೂಡ್ಲಿಗಿ ಬೆಟ್ಟ ಸಾಲು ಎನ್ನಲಾಗುತ್ತದೆ. ಇದು ಅನೆಕಲ್ಲು ಗುಡ್ಡಕ್ಕೆ ಉತ್ತರದಲ್ಲಿ ಸುಮಾರು ೮ ಕಿ.ಮೀ. ದೂರದಲ್ಲಿ ಆರಂಭಗೊಂಡು ಕೂಡ್ಲಿಗಿಯ ಉತ್ತರ ಮತ್ತು ಪೂರ್ವದ ಕಡೆಗೆ ಮುಂದುವರೆದು ಮುಂದೆ ಆಗ್ನೇಯ ದಿಕ್ಕಿಗೆ ಹೊರಳಿ ಜರಿಮಲೆ ದುರ್ಗದತ್ತ ಸಾಗುತ್ತದೆ. ಸಮುದ್ರ ಮಟ್ಟದಿಂದ ಈ ದುರ್ಗದ ಶಿಖರದ ಎತ್ತರ ೨,೭೪೨ ಅಡಿ. ಜರಿಮಲೆ ಒಂದು ಕಾಲಕ್ಕೆ ಪಾಳೆಯಗಾರರ ನೆಲೆ, ಕರ್ನಾಟಕ ಚರಿತ್ರೆಯಲ್ಲಿ ಉಲ್ಲೇಖಗೊಂಡಿರುವ ಪಾಳೆಯಪಟ್ಟುಗಳ ಸಾಲಿನಲ್ಲಿ ಈ ಸಂಸ್ಥಾನವನ್ನು ಗುರುತಿಸಲಾಗಿದೆ.

ಶಾಸನ, ಕಾವ್ಯ, ದಾಖಲೆ ಇತ್ಯಾದಿಗಳಲ್ಲಿ 'ಜರಿಮಲೆ' ಎಂಬುದರ ವಿವಿಧ ರೂಪಗಳು ಕಂಡುಬರುತ್ತವೆ. ಉದಾ. ಜಡ್ಡಿಮಲೆ, ಜರ್ದಿಮಲೆ, ಜೆರೆಮಲೆ, ಜೆರಿಮಲೆ, ಜರಮಲಿ, ಜರಿಮಲ, ಜರಿಮಲಿ, ಜರ್ಮಾಲಿ, ಜರಿಮಾಲಿ ಇತ್ಯಾದಿ. ಜನಪದ ಸಾಹಿತ್ಯದಲ್ಲಿ ಜರುಮಾಲೆ, ಜರಮಾಲೆ ಎಂಬ ಪ್ರಯೋಗಗಳಿವೆ. ಜರಿಮಲೆಯೆಂಬುದು ನಿಸರ್ಗವಾಚಿಯಾಗಿ ಕಂಡುಬರುತ್ತದೆ 'ಜರಿ' ಎಂಬುದು 'ಝರೀ' ಎಂಬ ಸಂಸ್ಕೃತ ಶಬ್ದದ ತದ್ಭವರೂಪ ಇದಕ್ಕೆ ಕೊಟ್ಟಿರುವ ಅರ್ಥ ಬೆಟ್ಟದ ಕೊರಕಲಿನಲ್ಲಿ ಹರಿಯುವ ನದಿ, ಗಿರಿನದಿ, ಬೆಟ್ಟದಲ್ಲಿ ಹುಟ್ಟಿದ ಪ್ರವಾಹ ಇತ್ಯಾದಿ. 'ಮಲೆ' ಎಂಬುದಕ್ಕೆ ಬೆಟ್ಟ, ಪರ್ವತ ಎಂಬ ಅರ್ಥಗಳಿರುವುದರಿಂದ ಜರಿಮಲೆಯೆಂಬುದು ಕೊರಕಲಿನಿಂದ ಹಳ್ಳದಿಂದ ಕೂಡಿದ ಪ್ರದೇಶ ಎಂದಾಗಬಹುದು. ಜರಿಮಲೆ ಪ್ರಾಕೃತಿಕ ಪರಿಸರವೂ ಇದನ್ನು ಸಮರ್ಥಿಸುತ್ತದೆ.

**ರಾಜಕೀಯ ವ್ಯವಸ್ಥೆ**

ಜರಿಮಲೆಯ ನಾಯಕರ ವಂಶಾವಳಿ (ಮೆಕೆಂಜಿಯ ಹಸ್ತಪ್ರತಿಯಲ್ಲಿ ಮತ್ತು ಕರ್ನಾಟಕದ ಕೈಫಿಯತ್ತುನಲ್ಲಿ ಪುಟ-೨೮ರಲ್ಲಿ)

ಪಾಪಣ್ಣ ನಾಯಕ ಪೆನ್ನಪ್ಪ ನಾಯಕ

ಬಸವಂತರಾಜ

ಭೂಮಿರಾಜ

ಬೂದಿಸಿದ್ದರಾಜ

ಬೊಮ್ಮಂತರಾಜ

ಇಮ್ಮಡಿ ನಾಯಕ

ಬೊಮ್ಮಣ್ಣ ನಾಯಕ ಮಲ್ಲಿಕಾರ್ಜುನನಾಯಕ ಇಮ್ಮಡಿ ನಾಯಕ

ಆರಿಷಿಯಿಂದ ಜರಿಮಲೆ ಸಮುಸ್ಥಾನ್ ತರು ಆರಿಸಿಯಿಂದ ವಂಶಾವಳಿಯೋರು ಬಂದದ್ದು ಬರಿಯುವುದಕ್ಕೆ ಶುಭಮಸ್ತು. ಇವರು ಕಂಚಿ ದೇಶದಲ್ಲಿ ಹಟ್ಟಿಯಂ ಹಾಕಿಕೊಂಡು ದಿವ್ಯವನ್ನು ಕಳೆಯುತ್ತಯಿದ್ದರು. ಆದೇಶವನ್ನು ಮುಸುಲ್ಮಾನು ಆತ್ರುದರುಮಿಯ್ಯಾ ಯಂಬುವರು ರಾಜ್ಯವನ್ನು ಆಳುತ್ತಾಯಿರ್ದ್ದರು. ಕದ್ರ ಮೂಲ ಪುರುಷರಾದ ಯೀಬೂದಿಶಿದ್ದರಾಜು ಯಂಬುವರು ಕದ್ರಿ ಕಂಚಿ ಪ್ರದೇಶದಲ್ಲಿ ಕಾಲವನ್ನು ಕಳೆಯುತ್ತಾಯಿದ್ದರು. ಅವರ ಯೀ ವ್ರತ ಯಂಥಾದ್ದು ಅಂದರೆ ಜಂಗಮಯಿಲ್ಲದೆ, ಶಿವಪೂಜೆಯಿಲ್ಲದೆ ವೂಟವಗ್ಯೆರೆಯಾಹೊತ್ತು ಬಿಟ್ಟು ಸುಮ್ಮನೆ ಕ್ಷೇಮವಾಗಿ ಯಿರುತ್ತಾಯಿರಲಾಗಿ ಸಿವಧ್ಯಾನ ಪಾರಾಯಣರಾಗಿ ಸಿವಸ್ಮರಣೆಯಿಂ ಯಿರುವುದಂ ಕಂಡು ಕದ್ರಿಮೂಲಪುರುಷರಾದ ಬೂದಿ ಶಿದ್ದರಾಜೂರ ಭಕ್ತಿ ಭಾವವಂ ಕಂಡು ಮಾಯಾದಸ್ವಾಮಿಗಳು ಬಂದು ಪ್ರತ್ಯಕ್ಷವಾಗಿ ಕಂಡು ಮಾತನಾಡಿದ್ದರೆಂದರೆ ನೀನು ಯಿಲ್ಲ ಯಿರಬೇಡ, ನಿನ್ನ ಕಂಪಳವನ್ನು ಕೆದುಕೊಂಡು ಮುಂದೆ ನಿನಗೆ ನಾನು ತೋರಿಶಿದಲ್ಲಿ ಹಟ್ಟಿಯಂ ಹಾಕುಯಂದು ಮಾಯಾದ ಗುರು ಹೇಳಿದರು. ಮೂಲಪುರುಷ ಬೂದಿಶಿದ್ದ ರಾಜೂರು ಯೀತನ ಭಾರ್ಯಳು ಲಿಂಗಮ್ಮ ನಾಗತಿಯವರು. ಯೀ ಯಮ್ಮಗೆ ಏಳು ಮಂದಿ ಮಕ್ಕಳು. ತಮ್ಮನೆ ದೇವರು (ಕಂಚಿವೋಬಳ ದೇವರು) ಬೊಮ್ಮದೇವರು (ಗಾದ್ರಲಿಂಗ) (ಕಂಕಾಳ್ಯೆಯ್ಯ) ಯೀದೇವರುಗಳ ಪೆಟ್ಟಿಗೆಗಳು ಪೂಜಾರಿಗಳ ಮೇಲೆ ವರಿಶಿಕೊಂಡು ೨೧ ದಿನಕ್ಕೆ ಕಂಚಿ ದೇಶದಿಂದ ಮಳೆಭೂಮ ಸಮುದ್ರಕ್ಕೆ ಬಂದರು ಮಾಯದ ಗುರುಗಳು ಆದ ಚನ್ನಬಸವಸ್ವಾಮಿಗಳ ಅಪ್ಪಣೆ ಪ್ರಕಾರ ಮಳೆ ಭೂಮಸಮುದ್ರದಲ್ಲಿ ಹಟ್ಟಿಯಂ ಹಾಕಿಕೊಂಡು ದಿನ ಕಳಿಯುತ್ತಾಯಿದ್ದರು. ಯಿತ್ತಲಾಗಿ ಮೂಲಪುರುಷರಾದಂಥ ಬೂದಿಶಿದ್ದರಾಜು ಯೀತನ ಮಕ್ಕಳು ೭ ಮಂದಿ ವತ್ತು ಕಳಿಯುವ ನಿಮಿತ್ಯವಾಗಿ ಅರಣ್ಯದೊಳು ಷಿಕಾರಿ ವುದ್ದಿಶ್ಯವಾಗಿ ಕೆಲವು ಮಂದಿ ಕೊಪ್ಪಲ ಗ್ರಾಮ ಶಿಂಮ್ಮುಗಳು

ತಮ ತಮಗೆ ಬೇಕಾದ ಆಯುಧ ಸಮೇತರಾಗಿ ಅರಣ್ಯದೊಳೊಬೇಂಟೆಯಂ ಆಡುತ್ತಾ ಬಂದರು. ಅಲ್ಲಿ ಗುಡ್ಡ ಗಂಹಾರ ಗವಿಗಳು, ಸರೋವರಗಳು, ಗಿಡವೃಕ್ಷಗಳು ಬಹಳ ಅದ್ಭುತವಾಗಿ ಯಿರುವುದು ಯಿವರ ಕಂಣಿಗೆ ಕಾಣಿಸುತ್ತಯಿತ್ತು.

ಮೂಲಪುರುಷರಾದ ಬೂದಿಶಿದ್ದರಾಜು ತನ್ನ ಮಕ್ಕಳಿಗೆ ಕಾಲಬಲಕ್ಕೆ ಯೇನೆಂದು ಹೇಳುತ್ತಾರೆ. ಯಿಂದೂ ಯೀಮಾಯಾದ ಸ್ವಾಮಿಗಳನ್ನು ಅರಿಕೆ ಮಾಡಿ ಅರುವು ತೊಡೊಂಡರೂ ಮಕ್ಕಳಿರಾ ಯಿಲ್ಲಿ ಮಹಾ ಶಂಕರವಾದ ಸ್ಥಳ ಬಹು ಯಚ್ಚರಿಕೆಯ ಮೇಲೆ ಆಡಿರಿ ಯಂದು ಮಾಯದ ಸ್ವಾಮಿಗಳು ಹೇಳಿದ್ದರು. ಅಷ್ಟರೊಳಗೆ ವಂದು ಅದ್ಭುತವಾದ ಕೊಳಲು ಜನಯಿರುವ ಸ್ಥಳಾ, ದೊಡ್ಡ ಗವಿ ಅದರ ವಳಗಿಂದ ವಂದು ಚಿರಿಯು ಯಿವರ ಸಪ್ಪಳಿಗೆ ವರಹೊಂಟು ಬಂದು ನಾಯಿಗಳನ್ನು ಯೀ ೭ ಮಂದಿ ಧೋರಿ ಮಕ್ಕಳನ್ನು (೭ ಮಂದಿಯನ್ನು) ಬಿಟ್ಟಿತೂಯಿವರು ಮಾತನಾಡಿದ್ದು ಯೀ ಭಾಗ್ಯ ಬಹಳ ಗಂಡುಭೂಮಿಯಾಗಿ ಕಾಣಿಸುತ್ತದೆ. ಒಳ್ಳೆಯದು ಮುಂದಕ್ಕೆ ಸಾಗಿರಿ ಎಂದು ಮಾಯಾದ ಸ್ವಾಮಿಗಳೂ ಹೇಳಿದರು ಮತ್ತು ಒಂದು ಗುಡ್ಡಕ್ಕೆ ಹೋದರು ಅಲ್ಲಿ ಸರೋವರಗಳು ಮೇಲು ಎತ್ತರದ ಮೇಲೆ ತಂಗಾಳಿಗೆ ಒಂದು ಮೊಲ ಮಲಗಿತ್ತು. ಈ ಜನರು ಧೋರಿ ಮಕ್ಕಳು ಕಣ್ಣು ತುಂಬಾ ನೋಡೋದರೊಳಗೆ ಮೊಲವು ಬಂದು ಬಹಳ ಬಹಳ ಜಗಳ ಮಾಡೋದರೊಳಗೆ ಮೂಲ ಪುರುಷರ ಚಿಕ್ಕ ಮಗನಾದ ಭೂಮರಾಜರೂ ತನ್ನ ಬಿಲ್ಲಿನಿಂದ ವಡದುಬಿಟ್ಟರು. ಅಲ್ಲಿ ಇದ್ದವರು ಇದು ಏನು ಆಶ್ಚರ್ಯ ಈ ಸ್ಥಳ ಬಹಳ ಕಲಿಯ ಜಾಗವಾಗಿ ಇದೆ ಎಂದರು. ಮೂಲಪುರುಷರಾದ ಬೂದಿಶಿದ್ಧರಾಜು, ಈತನ ಮಕ್ಕಳು, ಬೊಮ್ಮಂತರಾಜು, ಇಮ್ಮಡಿರಾಜು, ಮುಮ್ಮಡಿರಾಜು, ಮುಮ್ಮಡಿರಾಜು, ಮಲ್ಲಿಕಾರ್ಜುನನಾಯಕ, ಲಿಂಗಣ್ಣನಾಯಕ, ಕಕ್ಕುಲ ಪೆನ್ನಪ್ಪನಾಯಕ ಮುಂತಾದವರು.

"ಪ್ರಾಗಿತಿಹಾಸಕಾಲ ಮಾನವನ ನೆಲೆಯಾಗಿದ್ದ ಜರಿಮಲೆಯ ಪ್ರಸಿದ್ಧಿಗೆ ಬಂದದ್ದು, ಪಾಳೆಯಗಾರರಿಂದ, ಆಂಧ್ರದ ಕದ್ರಿಯ"[೪] ಮೂಲದವರಾದ ಇವರು ಕಾರಣಾಂತರಗಳಿಂದ ವಿಜಯನಗರಕ್ಕೆ ಬಂದು ನೆಲೆಸಿದ್ದರು. "ವಿಜಯನಗರದ ಅರಸರ ಸೇವೆಯನ್ನು ಮಾಡಿಕೊಂಡಿದ್ದ ಇವರಲ್ಲಿ ಮೊದಲಿಗೆ ಪಾಪಣ್ಣ ನಾಯಕ."[೫] ಇವನು ವೀರನರಸಿಂಹನ (ಕ್ರಿ.ಶ. ೧೪೮೯–೧೫೦೫) ಸೇವಕರಲ್ಲಿ ಒಬ್ಬನಾಗಿ ಸೇವೆ ಸಲ್ಲಿಸುತ್ತಿದ್ದನು. "ವೀರನರಸಿಂಹನ ಪ್ರೀತಿಗೆ ಪಾತ್ರನಾಗಿದ್ದರಿಂದ ಪಾಪಣ್ಣನಿಗೆ ವಡ್ಡು ದರೋಜಿ ಗ್ರಾಮಗಳು ಬಳುವಳಿಯಾಗಿ ಬಂದವು."[೬] ಮುಂದೆ ಈ ಬಳುವಳಿ ಗ್ರಾಮಕ್ಕೆ ಒಡೆಯನಾಗಿ ಆಳ್ವಿಕೆ ಮಾಡಿದವನು ಪಾಪಣ್ಣ ನಾಯಕನ ಮಗ ಪೆನ್ನಪ್ಪನಾಯಕನಿಗೆ ಉಡುಗೊರೆಯಾಗಿ ಕೊಟ್ಟನೆಂದು ತಿಳಿದುಬರುತ್ತದೆ. ಹೀಗೆ ಬಲಿಷ್ಠನಾದ ಪೆನ್ನಪ್ಪನು ಉಜ್ಜನಿಯಲ್ಲಿ ಕೋಟೆ ಕಟ್ಟಿಸಿದನೆಂದು ಹೇಳಿದ್ದರು. ಈಗ ಅಲ್ಲಿ ಕೋಟೆಯ ಯಾವ ಅವಶೇಷಗಳು ಕಂಡುಬರುವುದಿಲ್ಲ.

ವಿಜಯನಗರದ ಅಚ್ಯುತರಾಯನು ಜರಿಮಲೆ ನಾಯಕರಿಗೆ ೧೫.೩೩ ಮಹಮದ್‌ಷಾಯಿ ಪಗೋಡ ಆದಾಯ ಏರುವ ನಾಲ್ಕು ಮಾರ್ಗಗಳನ್ನು ಹಾಗೂ ೫೦೦ ಅಶ್ವದಳ ೩೦೦೦

ಕಾಲಾಳು ಪಡೆ ಇಟ್ಟುಕೊಳ್ಳಲು ಅನುಮತಿ ನೀಡಿದನು. ಈ ಅನುಮತಿಯನ್ನು ಯುದ್ಧ ಕಾಲದಲ್ಲಿ ವಿಜಯನಗರದ ಅರಸರಿಗೆ ಸಹಾಯ ಮಾಡಲಿಕ್ಕಾಗಿ ಸದಾ ಸೈನ್ಯವನ್ನು ಸಿದ್ಧವಾಗಿಡಬೇಕೆಂಬ ಷರತ್ತಿನ ಮೇಲೆ ನೀಡಲಾಗಿತ್ತು. ಈ ಪದ್ಧತಿ ವಿಜಯನಗರ ಪದ್ಧತಿ ಅರಸರ ವೈಶಿಷ್ಟ್ಯ. ಆಗ ಜರಿಮಲೆಯಲ್ಲಿ ಭೂಮಿ ರಾಜ ಪೆನ್ನಪ್ಪನಾಯಕನ ಮಗ ಆಳ್ವಿಕೆ ಮಾಡುತ್ತಿದ್ದನು. ನಂತರ ಅಧಿಕಾರಕ್ಕೆ ಬಂದವನು "ಇಮ್ಮಡಿನಾಯಕ ಭೂಮಿ ರಾಜನ ತಮ್ಮನ ಮಗ ಆಗ ಉಜ್ಜಯಿನಿಯನ್ನು ಹರಪನಹಳ್ಳಿ ಪಾಳೆಯಗಾರರು ಹಿಡಿದುಕೊಂಡರೆಂದು ತಿಳಿದುಬರುತ್ತದೆ."[೭] ಇದಕ್ಕೆ ಪೂರಕವೆಂಬಂತೆ "ಹರಪನಹಳ್ಳಿ ಪಾಳೆಯಗಾರರು ವಿಜಯದ ಸಂಕೇತವಾಗಿ ಮರಳುಸಿದ್ದೇಶ್ವರ ದೇವಾಲಯಕ್ಕೆ ಗಂಟೆಯನ್ನು ಸಮರ್ಪಿಸಿದಂತೆ ಅಲ್ಲಿಯ ಶಾಸನವು ತಿಳಿಸುತ್ತದೆ."[೮] ಇದರಿಂದ ವಿಜಯನಗರ ನಾಯಕನು ನೆಲೆ ಇಲ್ಲದ ಅಲೆದಾಡು ವಂತಾಯಿತು. ತನ್ನ ಸುರಕ್ಷತೆಗೋಸ್ಕರ ಭದ್ರವಾದ ಸ್ಥಳವನ್ನು ಹುಡುಕತೊಡಗಿದನು. ಆಗ ಇವನು ಈಗಿನ "ಜರಿಮಲೆ ಎಂಬ ಸ್ಥಳಕ್ಕೆ ಬಂದು ಚಿತ್ರದುರ್ಗ ನಾಯಕರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುವ ಮೂಲಕ ಸ್ನೇಹ ಸಂಪಾದಿಸಿ ಇಲ್ಲಿಯೇ ಕೋಟೆ ಕಟ್ಟಿಸಿ ರಾಜ್ಯವಾಳಿದನೆಂದು ತಿಳಿದುಬರುತ್ತದೆ."[೯] ಮುಂದೆ ಈ "ಜರಿಮಲೆ ಸಂಸ್ಥಾನವನ್ನು ಕಿರಿ ಇಮ್ಮಡಿ ನಾಯಕ ಬೊಮ್ಮಣ್ಣನಾಯಕ, ಇಮ್ಮಡಿ ನಾಯಕ, ಈತನ ಮಕ್ಕಳಾದ ಬೊಮ್ಮಣ್ಣನಾಯಕ ಮತ್ತು ಮಲ್ಲಿಕಾರ್ಜುನ ನಾಯಕರು ಆಳಿದರೆಂದು ಜರಿಮಲೆ ವಂಶಾವಳಿಯಿಂದ ತಿಳಿದು ಬರುತ್ತದೆ."[೧೦]

ಜರಿಮಲೆಯವರು ಕಾರಣಾಂತರದಿಂದ ಚಿತ್ರದುರ್ಗದವರ ವಿರುದ್ಧ ಹೈದರಾಲಿಯೊಂದಿಗೆ ಉತ್ತಮ ಸಂಬಂಧ ಹೊಂದಿದ್ದರು. ಆದರೆ "ಹೈದರಾಲಿಯ ಮಗ ಟಿಪ್ಪು ಪಾಳೆಯಗಾರರ ಕಡು ವಿರೋಧಿಯಾಗಿದ್ದನು. ಹಾಗಾಗಿ ಕ್ರಿ.ಶ. ೧೭೮೨ರಲ್ಲಿ ಜರಿಮಲೆಯನ್ನು ಟಿಪ್ಪು ವಶಪಡಿಸಿಕೊಂಡು"[೧೧] ಜರಿಮಲೆ ನಾಯಕರನ್ನು ಸೆರೆಹಿಡಿದು ಅವರಿಗೆ ಇಸ್ಲಾಂ ಮತಕ್ಕೆ ಪರಿವರ್ತನೆಯಾಗುವಂತೆ ಬಲವಂತ ಮಾಡಿದ್ದರಿಂದ ಜರಿಮಲೆಯವರು ಉಪಾಯದಿಂದ ಟಿಪ್ಪುವಿನ ಸೆರೆಯಿಂದ ತಪ್ಪಿಸಿಕೊಂಡು ಸುರಪುರಕ್ಕೆ ಪಲಾಯನ ಮಾಡಿದರೆಂದು ತಿಳಿದುಬರುತ್ತದೆ. ೪ನೇ ಆಂಗ್ಲೋ ಮೈಸೂರು ಯುದ್ಧದ ನಂತರ ಬ್ರಿಟಿಷರು ಮತ್ತು ನಿಜಾಮನಿಗೆ ಆದ ಒಪ್ಪಂದದಂತೆ ಜರಿಮಲೆ ಹೈದ್ರಾಬಾದ್ ನಿಜಾಮನಿಗೆ ಸೇರಿತು. ಜರಿಮಲೆಯವರು ಒಪ್ಪಂದದ ಮೇರೆಗೆ ಪುನಃ ಹೈದ್ರಾಬಾದ್ ನಿಜಾಮನಿಂದ ಪಡೆದರೆಂದು ಕಾಣುತ್ತದೆ. ಒಟ್ಟಿನಲ್ಲಿ ಸುಮಾರು ಕ್ರಿ.ಶ. ೧೫೦೦ ರಿಂದ ಕ್ರಿ.ಶ. ೧೮೦೦ರವರೆಗೆ ಈ ಪಾಳೆಯಗಾರರು ಅಸ್ತಿತ್ವದಲ್ಲಿದ್ದರೆಂದು ಈ ಮೇಲಿನ ಚರ್ಚೆಯಿಂದ ತಿಳಿಯುತ್ತದೆ. ಆದರೆ ಗೆಜೆಟಿಯರ್‌ಗಳು ವಿಶ್ವಕೋಶ ಈ ಮನೆತನ ಪೆನ್ನಪ್ಪನಾಯಕನಿಂದ ಆರಂಭವಾಯಿತೆಂದು ತಿಳಿಸುತ್ತದೆ.

ಪಾಪಣ್ಣ ನಾಯಕನ ನಂತರ ಅವನ ಮಗ ಪೆನ್ನಪ್ಪನಾಯಕನು ತನಗೆ ಬಳುವಳಿಯಾಗಿ ಬಂದ ಗ್ರಾಮಕ್ಕೆ ಒಡೆಯನಾದನು. ಇವನಿಗೆ "ಚಕ್ರವರ್ತಿ ತುಳುವ ವೀರನರಸಿಂಹನು (೧೫೦೫–

೧೫೨೯) ಗುಡೇಕೋಟೆ ಭೂಪ ಸಮುದ್ರ ಗ್ರಾಮಗಳನ್ನು ಉಡುಗೊರೆಯಾಗಿ ನೀಡಿ ಪುರಸ್ಕರಿಸಿದನು."[೧೨] ಕೆಲ ಕಾಲಾನಂತರ ಉಜ್ಜಯನಿಯ ದಟ್ಟ ಅರಣ್ಯಕ್ಕೆ ನಾಯಕನು ಭೇಟಿಗಾಗಿ ಹೋದನು. ವಿಶ್ರಾಂತಿ ಪಡೆಯುತ್ತಿದ್ದ ಸಮಯದಲ್ಲಿ ಸಿದ್ದೇಶ್ವರ ದೇವರು ಕನಸಿನಲ್ಲಿ ಕಾಣಿಸಿಕೊಂಡು ದೇವಾಲಯ ಮತ್ತು ಮಠವನ್ನು ಸ್ಥಾಪಿಸುವಂತೆ ಆದೇಶಿಸಿದಂತೆ. ಅದರಂತೆ ಅವನು ಅವೆರಡನ್ನು ಅದರ "ಸುತ್ತ ಕೋಟೆ ಕಟ್ಟಿ ಅದಕ್ಕೆ ಉಜ್ಜನಿಯೆಂದು ನಾಮಕರಣ ಮಾಡಿ ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡನೆಂದು ವಂಶಾವಳಿಯು ತಿಳಿಸುತ್ತದೆ."[೧೩] "ಉಜ್ಜನಿಯ ಹೆಸರಿನ ಉಲ್ಲೇಖವು ಕ್ರಿ.ಶ. ೧೨೬೮ರ ಶಾಸನದಲ್ಲಿ"[೧೪] ಇದೆ.

ಅಲ್ಲದೆ ಈ "ಸಿದ್ದೇಶ್ವರ ದೇವಾಲಯಕ್ಕೆ ಮೊದಲು ಮಲ್ಲಿಕಾರ್ಜುನ"[೧೫] ಎಂದು ಹೆಸರಿದ್ದು ನಂತರ ಸಿದ್ದೇಶ್ವರ ಎಂದು ಬದಲಾಗಿರುವುದು ಸ್ಪಷ್ಟವಾಗುತ್ತದೆ. "ಪ್ರಾಯಶಃ ಮರುಳ ಸಿದ್ದೇಶ್ವರರು ಇಲ್ಲಿಗೆ ಬಂದು ನೆಲಸಿದ ತರುವಾಯ ಈ ಹೆಸರು ಬಂದಿದೆ."[೧೬] ಉಜ್ಜನಿಯು ಪ್ರಮುಖ ಸ್ಥಳವಾಗಿದ್ದು ಅದರ ಮೇಲೆ ಪೆನ್ನಪ್ಪನಾಯಕನು ಆಕ್ರಮಣ ಮಾಡಿ ಗೆದ್ದುಕೊಂಡು ತನ್ನ ಸ್ಥಳವನ್ನು ದರೋಜಿಯಿಂದ ಉಜ್ಜನಿಗೆ ಬದಲಾಯಿಸಿದನೆಂದು ಸ್ಪಷ್ಟವಾಗಿ ಹೇಳಬಹುದು. ಪೆನ್ನಪ್ಪನಾಯಕನು ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಾ ಇದ್ದನು. ಅಚ್ಯುತರಾಯನ ಕಾಲದಲ್ಲಿ ಜರಿಮಲೆಯವರಿಗೆ ಅತಿ ಹೆಚ್ಚಿನ ಲಾಭವಾಯಿತು. ಚಕ್ರವರ್ತಿಗಳಿಂದ ೧೫೩೦೦ ಮಹಮ್ಮದ್‌ಷಾಹಿ ಪಗೋಡಾ ಆದಾಯವಿರುವ ನಾಲ್ಕು ಮಾರ್ಗಗಳನ್ನು ಪಡೆದುಕೊಂಡು ಕೆಲ ಕಾಲಾನಂತರ ಅಚ್ಯುತರಾಯನು ಜರಿಮಲೆಯ ಪೆನ್ನಪ್ಪನಾಯಕನಿಗೆ ೫೦೦ ಅಶ್ವದಳ ಮತ್ತು ೩೦೦೦ ಕಾಲಾಳು ಪಡೆ ಇಟ್ಟುಕೊಳ್ಳಲು ಅನುಮತಿ ನೀಡಿ ಕೇಳಿದಾಗ ಅದನ್ನು ಪೂರೈಸುವ ಷರತ್ತಿನ ಮೇರೆಗೆ ೩೫೧೫೦ ಮಹಮ್ಮದ್‌ಷಾಹಿ ಪಗೋಡಾ ಆದಾಯವಿರುವ ಮತ್ತೆರಡು ಹೆಚ್ಚಿಗೆ ಮಾಗಣಿಗಳನ್ನು ನೀಡಿದನು.

ಈ ಪ್ರದೇಶದಲ್ಲಿ ನೆಲೆನಿಂತು ಆಡಳಿತ ನಡೆಸುತ್ತಿದ್ದ ಸಂದರ್ಭದಲ್ಲಿ ಬಿಜಾಪುರದ ಸುಲ್ತಾನರು ವಿಜಯನಗರದ ಪ್ರಾಂತ್ಯಗಳ ಮೇಲೆ ದಾಳಿ ಮಾಡುವ ಸೂಚನೆ ದೊರೆತಾಗ ಚಕ್ರವರ್ತಿಯಾದ ಅಚ್ಯುತರಾಯನು (ಕ್ರಿ.ಶ. ೧೫೨೯–೧೫೪೨) ತನ್ನ ಸಂಸ್ಥಾನಗಳಾದ ಕನಕಗಿರಿ, ರಾಯದುರ್ಗ, ಸಿರಾ, ಬಸವಾಪಟ್ಟಣ ಮತ್ತು ಉಜ್ಜನಿಯ ನಾಯಕರುಗಳಿಗೆ ತಮ್ಮ ತಮ್ಮ ಸೇನಾಬಲದೊಂದಿದೆ ಸಜ್ಜಾಗಬೇಕೆಂದು ಆದೇಶಿಸಿದನು. ಇಂತಹ ಸನ್ನಿವೇಶದಲ್ಲಿ ಸುಲ್ತಾನನು ವಿಜಯನಗರದ ಗಡಿಗಳ ನುಗ್ಗಿ ಕೊಳ್ಳೆ ಹೊಡೆಯುತ್ತಿದ್ದ ಸಂದರ್ಭದಲ್ಲಿ ಗುತ್ತಿ, ಬಳ್ಳಾರಿ, ಸಿರಾ, ಬಸವಾಪಟ್ಟಣ, ಪಾವಗಡ, ಕಣಕುಪ್ಪೆ, ಕುಂದರ್ಪಿ, ನಾರಾಯಣ ದೇವರಕೆರೆ, ಡಣಾಯಕನ ಕೆರೆ, ಸೊಂಡೂರು ಪ್ರದೇಶವನ್ನು ಆಕ್ರಮಿಸಿಕೊಂಡು ಅಲ್ಲಿ ತನ್ನ ಸೇನಾಬಲವನ್ನಿಟ್ಟನು. ಹೀಗೆ ಉಜ್ಜನಿಯಲ್ಲಿ ನಿರಾತಂಕವಾಗಿ ಆಳ್ವಿಕೆ ನಡೆಸುತ್ತಿದ್ದ ಪೆನ್ನಪ್ಪನಾಯಕನಿಗೆ ಬಂಸವಂತರಾಜ, ಭೂಮಿರಾಜ, ಬೂದಿಸಿದ್ದರಾಜ ಎಂಬ ಮೂರು ಜನ ಪುತ್ರರು ಇದ್ದರು. ಇವರೆಲ್ಲರೂ ತಮ್ಮ ತಂದೆಯ ಏಳಿಗೆಗೆ ಕಾಣಿಕೆ ಸಲ್ಲಿಸಿ ಧೈರ್ಯ ಸಾಹಸಗಳಿಗೆ ಹೆಸರುವಾಸಿಯಾಗಿದ್ದಾರೆ. ಇವರಲ್ಲಿ ಭೂಮಿರಾಜ ಅತ್ಯಂತ ಪ್ರತಿಭಾನ್ವಿತ

ಹಾಗೂ ಸಾಹಸಿ, ಅವನ ಸಾಹಸವನ್ನು ಈ ಘಟನೆಯೊಂದಿಗೆ ಸಮರ್ಥಿಸಬಹುದು. ವಿಜಾಪುರದ ಬಾದ್‌ಷಹಾನ ಆಸ್ಥಾನದಲ್ಲಿ ವಿಶೇಷವಾದ ಕುದುರೆ ಇತ್ತು. ಅದನ್ನು ಏರಿ ಸವಾರಿ ಮಾಡಲು ಎಲ್ಲರೂ ಭಯ ಪಡುತ್ತಿದ್ದರು. ಕುದುರೆ ಸವಾರಿಯಲ್ಲಿ ಪ್ರತಿಭಾನ್ವಿತನಾದ ಭೂಮಿರಾಜನನ್ನು ಬಾದ್‌ಷಹಾನು ಬಿಜಾಪುರಕ್ಕೆ ಆಹ್ವಾನಿಸಿ ಆ ಕುದುರೆಯನ್ನು ಪಳಗಿಸು ಎಂದು ಆದೇಶಿಸಿದನು. ಅವನು ಅದನ್ನು ಸುಲಭವಾಗಿ ಪಳಗಿಸಿದನು. ಅವನ ಸಾಹಸಕ್ಕೆ ಮೆಚ್ಚಿದ ಬಾದ್‌ಷಹಾನು ಅವನಿಗೆ ಜುಮ್ಮೇದಾರ್ ಗುಡ್ಡಯ್ಯ ಜರಿಮಲ್ಲ ಎಂಬ ಬಿರುದನ್ನು ನೀಡಿ ದರ್ಬಾರ್‌ಗೆ ಹಾಜರಾಗುವಂತೆ ಸೂಚಿಸಿದನು. ಅಲ್ಲದೆ ನಾಲ್ಕು ಮಾಗಣಿಗಳನ್ನು ಅವನಿಗೆ ನೀಡಿ ೩೦೦೦ ರೂ.ಗಳ ಕಾಣಿಕೆಯನ್ನು ನೀಡಿದರು. ಮತ್ತು ೨೦೦೦ ಕಾಲಾಳು ಪಡೆ ಹಾಗೂ ೩೦೦ ಅಶ್ವದಳವನ್ನು ಇಟ್ಟುಕೊಳ್ಳಲು ಅನುಮತಿ ನೀಡಿದನು.

ಹೀಗೆ ವಿಜಾಪುರದಿಂದ ಸ್ನೇಹವನ್ನು ಸಂಪಾದಿಸಿದ ಭೂಮಿರಾಜನು ನೆರೆಹೊರೆಯವರ ಪಾಳೆಯಗಾರರಲ್ಲಿ ಭೀತಿ ಹುಟ್ಟಿಸಿದುದು ಸಹಜವಾಗಿದೆ. "ಭೂಮಿರಾಜನಿಗೆ ಏಳು ಜನ ಪುತ್ರರಿದ್ದುದನ್ನು ಅಂತಾಪುರ ಕೈಫಿಯತ್ತು ಮತ್ತು ದರೋಜಿ ಗ್ರಾಮದ ಕೈಫಿಯತ್ತುಗಳು"[೧೭] ತಿಳಿಸಿದರೆ "ಜರಿಮಲೆ ಸಂಸ್ಥಾನದ ವಂಶಾವಳಿಯು"[೧೮] ಬೂದಿಶಿದ್ದ ರಾಜನಿಗೆ ಏಳು ಜನ ಪುತ್ರರಿದ್ದುದನ್ನು ತಿಳಿಸುತ್ತದೆ. ಹೀಗೆ ವಿಭಿನ್ನ ಮಾಹಿತಿ ಇವುಗಳಲ್ಲಿ ಇರುವುದರಿಂದ ಯಾರು? ಯಾರಿಗೆ? ಯಾವ ರೀತಿಯ ಸಂಬಂಧ? ಎಂದು ಹೇಳಲು ಅತ್ಯಂತ ತೊಡಕಾಗಿದೆ. ಪೆನ್ನಪ್ಪನಾಯಕನ ನಂತರ ಅವನ ಹಿರಿಯ ಪುತ್ರ ಬಸವಂತರಾಜ ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಭೂಮಿರಾಜ, ಬೂದಿಶಿದ್ದ ರಾಜ ತಮ್ಮ ಅಣ್ಣನಿಗೆ ನೆರವು ನೀಡಿ ಈ ಪಾಳೆಯ ಪಟ್ಟಿನ ಔನ್ನತ್ಯಕ್ಕೆ ಕಾರಣರಾದರೆಂಬುದನ್ನು ಮಾತ್ರ ಹೇಳಲಿಕ್ಕೆ ಸಾಧ್ಯವಾಗುತ್ತದೆ. ಮೆಕಂಜಿ ಸಂಗ್ರಹಿಸಿರುವ ವಂಶಾವಳಿಯ ಬಸವಂತರಾಜನು ರಾಜ್ಯವನ್ನು ತನ್ನ ಏಳು ಮಕ್ಕಳಲ್ಲಿ ಹಂಚಿದನೆಂದು ತಿಳಿಸುತ್ತದೆ. ಅವರಲ್ಲಿ ಹಿರಿಯವನಾದ ಇಮ್ಮಡಿನಾಯಕನು ಕಣಕುಪ್ಪೆ, ಉಜ್ಜಯಿನಿ, ಕೂಡಲಗಿ, ಭೂಮಸಮುದ್ರಗಳನ್ನು ಪಡೆದುಕೊಂಡು ಮುಂದೆ ಚರಿತ್ರೆಯಲ್ಲಿ ಬೆಳಕಿಗೆ ಬರುತ್ತಾನೆ. ಬಿಜಾಪುರದ ಸುಲ್ತಾನನಿಂದ ಬಿರುದು ಪಡೆದುಕೊಂಡಿದ್ದ ಜರಿಮಲೆಯವರು ಸುಲ್ತಾನರಿಗೆ ಅವಿಧೇಯವಾಗಿ ನಡೆದುಕೊಂಡು ನಗರದವರ ಜೊತೆ ಸೇರಿ ಕೊಂಡಿದ್ದರಿಂದ ಅವರನ್ನು ಶಿಕ್ಷಿಶಲು ಸೇನಾ ಸಮೇತರಾಗಿ ಬಂದರು. ಆ ವೇಳೆಗೆ ಭೂಮಿರಾಜ ಮತ್ತು ಆತನ ಸೋದರರು ಮರಣ ಹೊಂದಿದ್ದು ಇಮ್ಮಡಿ ನಾಯಕನು ಆಳ್ವಿಕೆ ಮಾಡುತ್ತಿದ್ದನು. ವಿಜಾಪುರದ ಸುಲ್ತಾನನು ಉಜ್ಜಯನಿಗೆ ಮುತ್ತಿಗೆ ಹಾಕಿ ನಾಯಕನನ್ನು ಸೆರೆ ಹಿಡಿದನು. ನಂತರ ತಮ್ಮ ಸೇನೆಯ ಒಂದು ತುಕಡಿಯನ್ನು ಅಲ್ಲಿ ಇಟ್ಟು ನಗರದವರ ವಿರುದ್ಧ ಹೊರಟನು. ಅವರನ್ನು ಶಿಕ್ಷಿಸಿದರು. ಈ ಅವಧಿಯಲ್ಲಿ ಇಮ್ಮಡಿ ನಾಯಕನಿಗೆ ಉಜ್ಜಯನಿಯನ್ನು ಹಿಂತಿರುಗಿ ಪಡೆದುಕೊಳ್ಳಲಿಕ್ಕೆ ಹಣ ನೀಡಬೇಕೆಂದು ಒತ್ತಾಯಿಸಿದಾಗ ಅದನ್ನು ಸಂದಾಯಕೊಳ್ಳಲಿಕ್ಕೆ ಹಣ ನೀಡಬೇಕೆಂದು ಒತ್ತಾಯಿಸಿದಾಗ ಅದನ್ನು ಸಂದಾಯ ಮಾಡುವುದಕ್ಕೆ ಇಮ್ಮಡಿ ನಾಯಕನು ಪ್ರಯತ್ನ ಮಾಡುತ್ತಿದ್ದನು.

ಅವಕಾಶಕ್ಕಾಗಿ ಕಾಯುತ್ತಿದ್ದ ಹರಪನಹಳ್ಳಿ ನಾಯಕರು ಆ ವಿಜಾಪುರದವರಿಗೆ ೭೦೦ ಪಗೋಡ ಹಣವನ್ನು ನೀಡಿ ಉಜ್ಜಯನಿಯನ್ನು ಪಡೆದುಕೊಂಡರು. ಹೀಗೆ ಉಜ್ಜಯನಿಯನ್ನು ಕಳೆದುಕೊಂಡ ಇಮ್ಮಡಿನಾಯಕನು ಹರಪನಹಳ್ಳಿಯವರ ವಿರುದ್ಧ ಒಳಗೆ ದ್ವೇಷ ಸಾಧಿಸುತ್ತಾ ತನ್ನ ಮತ್ತೊಂದು ಜಾಗೀರಾದ ಕೂಡಲಗಿಗೆ ಆಗಮಿಸಿದನು. ಇದೇ ಸಮಯದಲ್ಲಿ ಚಿತ್ರದುರ್ಗದ ನಾಯಕರು ಇಮ್ಮಡಿ ನಾಯಕನಿಗೆ ಸೇರಿದ್ದ ಕಣಕುಪ್ಪೆಯ ಮೇಲೆ ಆಕ್ರಮಣ ಮಾಡಿ ಗೆದ್ದುಕೊಂಡರು.

ಚಿತ್ರದುರ್ಗದವರ ಶಕ್ತಿಯನ್ನು ಅರಿತಿದ್ದ ಇಮ್ಮಡಿನಾಯಕನು ಅವರ ಜೊತೆ ಸಂಘರ್ಷವನ್ನು ಮಾಡಲಿಚ್ಚಿಸದೆ ಸ್ನೇಹವೇ ಲೇಸೆಂದು ಬಗೆದು ದುರ್ಗದವರನ್ನು ಗೌರವಿಸಲಿಕ್ಕೆ ಕೂಡಲಗಿಯಿಂದ ಭೂಪಸಮುದ್ರಕ್ಕೆ ಹೋದನು. ಈ ಅವಕಾಶವನ್ನುಪಯೋಗಿಸಿಕೊಂಡ ಹರಪನಹಳ್ಳಿ ನಾಯಕರು ಕೂಡಲಗಿಯನ್ನು ಆಕ್ರಮಿಸಿಕೊಂಡರು. ತನ್ನ ತಂದೆಯಿಂದ ಪಡೆದುಕೊಂಡಿದ್ದ ಎಲ್ಲಾ ಭಾಗಗಳನ್ನು ಕಳೆದುಕೊಂಡ ಇಮ್ಮಡಿನಾಯಕನು ನೆಲೆಯಿಲ್ಲದೆ ಅಲೆದಾಡುವಂತಾಯಿತು. ತನ್ನ ಸುರಕ್ಷತೆಗೋಸ್ಕರ ಭದ್ರವಾದ ಸ್ಥಳವನ್ನು ಹುಡುಕತೊಡಗಿದನು. ಅವನು ಈಗೀಗ ಜರಿಮಲೆ ಎಂಬ ಸ್ಥಳಕ್ಕೆ ಬಂದು ಅದನ್ನು ತನ್ನ ರಕ್ಷಣೆಗೆ ಸೂಕ್ತ ಸ್ಥಳವೆಂದು ತಿಳಿದುಕೊಂಡು ಚಿತ್ರದುರ್ಗದ ನಾಯಕರೊಂದಿಗೆ ಮಾತುಕತೆ ನಡೆಸಿ ಶಾಂತಿ ಒಪ್ಪಂದ ಮಾಡಿಕೊಂಡನು. ಸ್ನೇಹವು ವೈವಾಹಿಕ ಸಂಬಂಧವನ್ನು ಪಡೆದುಕೊಂಡಿದ್ದ ಈತನು ತನ್ನ ಸುತ್ತಲಿನ ಪಾಳೆಯಗಾರರ ಭೀತಿಯಿಂದ ಪಾರಾಗಿ ಧೈರ್ಯದಿಂದ ಜರಿಮಲೆಯಲ್ಲಿ ಕೋಟೆಯನ್ನು, ಅರಮನೆಯನ್ನು ನಿರ್ಮಾಣ ಮಾಡಿ ಜನರು ವಾಸಿಸುವುದಕ್ಕೆ ಎಲ್ಲಾ ರೀತಿಯ ಅನುಕೂಲ ಮಾಡಿಕೊಟ್ಟನು.

ಹಟ್ಟಿನಾಯಕ ಮನೆತನದ ಮಲ್ಲಪ್ಪನಾಯಕನ ಮಗಳನ್ನು ವಿವಾಹವಾಗಿ ಜರಿಮಲೆಯಲ್ಲಿ ನಿರಿರಾತಂಕವಾಗಿ ಯಾವ ಪಾಳೇಗಾರರ ವಿರೋಧವಿಲ್ಲದೆ ಕೆಲಕಾಲ ರಾಜ್ಯವಾಳಿದನು. ಅಂದಿನ ರಾಜಕೀಯ ಸನ್ನಿವೇಶದಲ್ಲಿ ಇಮ್ಮಡಿನಾಯಕನ ಕ್ರಮ ಸರಿಯಾದುದೇ ಆಗಿದೆ. ಇವನ ಇಬ್ಬರು ಪತ್ನಿಯರಲ್ಲಿ ಬೊಮ್ಮಂತರಾಜ ಮತ್ತು ಕಿರಿ ಇಮ್ಮಡಿನಾಯಕ ಎಂಬ ಇಬ್ಬರು ಮಕ್ಕಳು ಜನಿಸಿದರು. ಅಕಾಲ ಮರಣಕ್ಕೀಡಾದ ಬೊಮ್ಮಂತರಾಜನ ಉತ್ತರಾಧಿಕಾರಿಯಾಗಿ ಕಿರಿ ಇಮ್ಮಡಿ ನಾಯಕನು ಜರಿಮಲೆ ಸಂಸ್ಥಾನದ ನಾಯಕನಾಗಿ ಆಳ್ವಿಕೆ ನಡೆಸಿದನು. ಶತ್ರುಗಳಾಗಿದ್ದ ಹರಪನಹಳ್ಳಿ ಪಾಳೆಯಗಾರರು ಜರಿಮಲೆಯವರಿಗೆ ಪದೇ ಪದೇ ಕಿರುಕುಳ ಕೊಡಲಾರಂಭಿಸಿದರು. ನಂತರ ಬಂದ ಬೊಮ್ಮಣ್ಣನಾಯಕನ ಕಾಲದಲ್ಲಿ ಇದು ಹೆಚ್ಚಾಯಿತು. ಹರಪನಹಳ್ಳಿಯವರೇ ಅಲ್ಲದೆ ಚಿತ್ರದುರ್ಗದವರೂ ಕೂಡ ಜರಿಮಲೆಯವರಿಗೆ ತೊಂದರೆ ಕೊಡಲಾರಂಭಿಸಿದರು.

"ಚಿತ್ರದುರ್ಗದ ಚಿಕ್ಕಣ್ಣನಾಯಕನು (೧೬೭೪-೧೬೮೬) ಜರಿಮಲೆಯವರಿಗೆ ಸೇರಿದ್ದ ಉಜ್ಜಯನಿ ದುರ್ಗದ ಮೇಲೆ ಆಕ್ರಮಣ ಮಾಡಿದನು."[೧೯] ದುರ್ಗದ ದಂಡನ್ನು ಎದುರಿಸುವಷ್ಟು ಬಲ ಹೊಂದಿಲ್ಲದ ಜರಿಮಲೆಯ ಬೊಮ್ಮಣ್ಣನಾಯಕನು ಅವರೊಂದಿಗೆ ಸಂಧಾನ ನಡೆಸಿ ಉಜ್ಜಯಿನಿಯನ್ನು ವಾಪಾಸ್ ಪಡೆದುಕೊಂಡನು. ಅವಕಾಶವಾದಿಗಳಾಗಿದ್ದ ಹರಪನಹಳ್ಳಿ ನಾಯಕರು ಉಜ್ಜಯನಿಯನ್ನು ಪಡೆದೇ ತೀರಬೇಕೆಂಬ ಛಲದಿಂದ ಬಿದನೂರಿನವರ ಜೊತೆ ಕೈಜೋಡಿಸಿದರು.

ಇಬ್ಬರೂ ಒಟ್ಟಾಗಿ ಜರಿಮಲೆಯವರ ಮೇಲೆ ಆಕ್ರಮಣ ಮಾಡಿದರು. ಬೊಮ್ಮಣ್ಣನಾಯಕನ ಸಹಾಯಕ್ಕೆ ಚಿತ್ರದುರ್ಗದ ಸೇನೆ ಆಗಮಿಸಿತು. ಕ್ರಿ.ಶ. ೧೬೮೫ರ ಕಾರ್ತಿಕ ಶುದ್ಧದಲ್ಲಿ ಉಜ್ಜನಿಯ ಕೋಟೆಯನ್ನು ೧೨ ದಿವಸಗಳು ಮುತ್ತಿ ಊರನ್ನು ತೆಗೆದುಕೊಂಡರು. ಆ ಯುದ್ಧದಲ್ಲಿ "ದುರ್ಗದ ದಂಡು ಸೋತು ಹೋಯಿತು. ಆ ಕೋಟೆಯಲ್ಲಿದ್ದ ಜರಿಮಲೆ ಬೊಮ್ಮಣ್ಣನಾಯಕನನ್ನು ಹರಪನಹಳ್ಳಿಯವರು ಖೈದಿಯಾಗಿ ಹಿಡಿದುಕೊಂಡರು. ೩-೪ ತಿಂಗಳ ಮೇಲೆ ಬಿಟ್ಟರು."[೨೦]

ಬೊಮ್ಮಣ್ಣನಾಯಕನ ದುರ್ಬಲತೆಯ ಲಾಭವನ್ನು ಪಡೆದುಕೊಂಡ ಮರಾಠರ ದಂಡನಾಯಕ ಸಿದ್ದಾಜಿ ಗೋರ್ಪಡೆಯು ಕ್ರಿ.ಶ. ೧೭೨೮ರಲ್ಲಿ ಗುತ್ತಿಯಿಂದ ಬಂದು ಸೊಂಡೂರು, ಕುಡತಿನಿ ಮುಂತಾದ ಪ್ರದೇಶಗಳ ಮೇಲೆ ಆಕ್ರಮಣ ಮಾಡಿ ಗೆದ್ದುಕೊಂಡು ೮ ವರ್ಷಗಳ ಚೌತ್ ನೀಡುವಂತೆ ಒತ್ತಾಯಿಸಿದನು. ಇದೇ ಸಮಯದಲ್ಲಿ ಹರಪನಹಳ್ಳಿಯವರೂ ಕೂಡ ಕ್ರಿ.ಶ. ೧೭೪೨ರಲ್ಲಿ ಜರಿಮಲೆಯವರ ನಾರಾಯಣದೇವರಕೆರೆ, ಡಾಣಾಯಕನ ಕೆರೆ ಪ್ರದೇಶಗಳನ್ನು ವಶಪಡಿಸಿಕೊಂಡರು. ಹೀಗೆ ಬೊಮ್ಮಣ್ಣನಾಯನು ತನ್ನ ಪೂರ್ವಜರಿಂದ ಬಳುವಳಿಯಾಗಿ ಪಡೆದಿದ್ದ ಪ್ರಾಂತ್ಯಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಹೋರಾಟ ಮಾಡಿ ದುರ್ಗದವರ ಸ್ನೇಹ ಸಂಪಾದಿಸಿದರೂ ಕೂಡ ಗಳಿಸಿದ್ದುದಕ್ಕಿಂತ ಕಳೆದುಕೊಂಡುದೇ ಹೆಚ್ಚಾಯಿತು. ಇವನಿಗೆ ಮುಮ್ಮಡಿ ನಾಯಕ ಮತ್ತು ಇಮ್ಮಡಿನಾಯಕ ಎಂಬ ಇಬ್ಬರು ಪುತ್ರರಿದ್ದರು. ಇವನ ಕಾಲ ಜರಿಮಲೆಯವರಿಗೆ ಅತಿ ಸಂಕಷ್ಟದ ಕಾಲ ಎನ್ನಬಹುದು. ಚಿತ್ರದುರ್ಗದ ನಾಯಕರು ಜರಿಮಲೆಯ ದಂಡನಾಯಕ ಶಂಕರದೇವರ ಹಂಪಣ್ಣನನ್ನು ಸೇನಾಸಮೇತ ದುರ್ಗಕ್ಕೆ ಕಳುಹಿಸುವಂತೆ ಇಮ್ಮಡಿನಾಯಕನಿಗೆ ಕೋರಿದಾಗ; ಅದನ್ನು ಅವನು ತಿರಸ್ಕರಿಸಿದನು. ಅಲ್ಲದೆ ದುರ್ಗದ ಗಡಿ ಪ್ರದೇಶಗಳಲ್ಲಿ ದಾಂಧಲೆ ಆರಂಭಿಸಿದನು. ಇದರಿಂದ ಕೋಪಗೊಂಡ ರಾಜವೀರ ಮದಕರಿನಾಯಕ (ಕ್ರಿ.ಶ. ೧೭೫೫-೧೭೭೯) ಜರಿಮಲೆಯ ಮೇಲೆ ದಂಡೆತ್ತಿ ಬಂದನು. ಮುತ್ತಿಗೆ ಹಲವಾರು ದಿನಗಳ ಕಾಲ ಮುಂದುವರಿಯಿತು. ಜರಿಮಲೆಯ ಕೋಟೆ ಬಾಗಿಲು ತೆರೆಯಿತು. ಜನರಿಗೆ ಯಾವುದೇ ರೀತಿಯ ತೊಂದರೆ ಕೊಡದೆ ನಾಯಕ ಕುಟುಂಬದವರನ್ನೆಲ್ಲಾ ಸೆರೆ ಹಿಡಿಯಲಾಯಿತು. ಅವರನ್ನು ಚಿತ್ರದುರ್ಗದ ಕೋಟೆಗೆ ಕರೆತಂದು ಸೆರೆಯಲ್ಲಿಟ್ಟನು. ಕೆಲವು ದಿನಗಳ ನಂತರ ಇಮ್ಮಡಿ ನಾಯಕನ ಮಕ್ಕಳಾದ ಬೊಮ್ಮಣ್ಣನಾಯಕ ಮತ್ತು ಮಲ್ಲಿಕಾರ್ಜುನ ನಾಯಕನನ್ನು ಸೆರೆಯಿಂದ ಬಿಡುಗಡೆ ಮಾಡಿ ಜರಿಮಲೆಗೆ ಕಳುಹಿಸಿದನು. ಮತ್ತು ೫೦೦ ಕಾಲಾಳು ಪಡೆಯೊಂದಿಗೆ ದುರ್ಗದವರಿಗೆ ಸೇವೆ ಸಲ್ಲಿಸಲು ಷರತ್ತಿಗೆ ಒಪ್ಪಿದರು.

**ಜರಿಮಲೆ ಪಾಳೆಯಗಾರರ ಅವನತಿ ಹಂತ**

ಈ ವೇಳೆಗಾಗಲೇ ಚಿತ್ರದುರ್ಗವು ದಕ್ಷಿಣ ಭಾರತದಲ್ಲಿ ಒಂದು ಬಲಿಷ್ಠ ಸಂಸ್ಥಾನವಾಗಿತ್ತು. ಮರಾಠರು ಮತ್ತು ಹೈದರ್ ದುರ್ಗದ ದೊರೆಗಳ ಸಹಾಯವಿಲ್ಲದೆ ಏನೂ ಮಾಡದ ಸ್ಥಿತಿಯಲ್ಲಿದ್ದರು. ಇಕ್ಕೇರಿ, ಬಂಕಾಪುರ ಮುಂತಾದ ಬಲಾಢ್ಯ ಕೋಟೆಗಳನ್ನು ಮದಕರಿಯು ಹೈದರನಿಗೆ ಗೆದ್ದು ಕೊಟ್ಟಿದ್ದನು. ಗುತ್ತಿಯ ಮೇಲಿನ ದಾಳಿಯಲ್ಲಿ ಮದಕರಿಯು ಹೈದರನಿಗೆ ಸಹಾಯ ಮಾಡಿ ಆ

ಕೋಟೆಯ ನಿಲುವಿಗೆ ಕಾರಣನಾಗಿದ್ದನು. ಮದಕರಿಯ ಶಕ್ತಿಯನ್ನು ಅರಿತಿದ್ದ ಹೈದರಾಲಿಯ ಭವಿಷ್ಯದಲ್ಲಿ ಸ್ನೇಹ ನಿಧನವಾಗಿ ದ್ವೇಷ, ಸಂದೇಹದ ಕಡೆ ಹೊರಳಿತು. ಇಂತಹ ಸನ್ನಿವೇಶದಲ್ಲಿ ಹೈದರನು ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದನು. ಚಿತ್ರದುರ್ಗದಲ್ಲಿ ಮದಕರಿಯು (ಕ್ರಿ.ಶ.೧೭೫೫–೧೭೭೯) ಸುಮ್ಮನೆ ಕೂರದೆ ಮರಾಠರ ಸ್ನೇಹವನ್ನು ಸಂಪಾದಿಸಿ ಅವರಿಗೆ ಹೈದರನಿಗೆ ಸೇರಿದ್ದ ಹಲವಾರು ಕೋಟೆಗಳನ್ನು ಗೆದ್ದುಕೊಟ್ಟನು. ಕೋಪಗೊಂಡ ಹೈದರಾಲಿಯು ಮದಕರಿಯ ಸೊಕ್ಕನ್ನು ಮುರಿಯಲು ಸೇನಾಸಮೇತನಾಗಿ ದುರ್ಗದ ಮೇಲೆ ದಾಳಿ ಮಾಡಲು ಹೊರಟನು. ಮಾರ್ಗ ಮಧ್ಯದಲ್ಲಿ ಅವನು ರತ್ನಗಿರಿಯಲ್ಲಿ ತಂಗಿದ್ದನು. ಈ ಸುದ್ದಿ ಶೀಘ್ರವಾಗಿ ಚಿತ್ರದುರ್ಗವನ್ನು ತಲುಪಿತು. ಮದಕರಿಯೂ ಕೂಡ ಹೈದರನನ್ನು ಎದುರಿಸಲು ಸಜ್ಜಾಗಿ ತನ್ನ ಆಶ್ರಿತ ಸಂಸ್ಥಾನಗಳಿಗೆ ಸೇನೆಯನ್ನು ಕಳುಹಿಸಿಕೊಂಡುವಂತೆ ಪತ್ರ ಬರೆದನು. ಇಂತಹ ಪತ್ರ ಜರಿಮಲೆಯ ನಾಯಕರಿಗೂ ತಲುಪಿತು. ಅಲ್ಲಿದ್ದ ಬೊಮ್ಮಣ್ಣನಾಯಕನು ಸೇನೆಯನ್ನು ಸಂಗ್ರಹಿಸಿ ಸಂಸ್ಥಾನದ ವ್ಯವಹಾರವನ್ನು ತನ್ನ ಸೋದರನಾದ ಮಲ್ಲಿಕಾರ್ಜುನ ನಾಯಕನಿಗೆ ವಹಿಸಿ ಚಿತ್ರದುರ್ಗದತ್ತ ಹೊರಟನು. ಆ ವೇಳೆಗೆ ಹೈದರನು ದುರ್ಗಕ್ಕೆ ಮುತ್ತಿಗೆ ಹಾಕಿ ಮುರು ತಿಂಗಳುಗಳಾದವು. ಈ ಸನ್ನಿವೇಶದಲ್ಲಿ ದುರ್ಗದವರು ಹೈದರನೊಂದಿಗೆ ಒಪ್ಪಂದವೇನಾದರೂ ಮಾಡಿಕೊಳ್ಳಬೇಕಾದ ಸಂದರ್ಭ ಒದಗಿದರೆ ಸೆರೆಮನೆಯಲ್ಲಿದ್ದ ಜರಿಮಲೆನಾಯಕ ಇಮ್ಮಡಿನಾಯಕನನ್ನು ಬಿಡುಗಡೆ ಮಾಡಬೇಕಾಗಬಹುದು. ಅವನು ತೊಂದರೆ ಕೊಡುವ ವ್ಯಕ್ತಿ ಅಲ್ಲದೆ ಬಲಾಢ್ಯ ಎಂದು ಆಲೋಚನೆ ಮಾಡಿ ಮದಕರಿನಾಯಕನು ಇಮ್ಮಡಿ ನಾಯಕನನ್ನು ಕೊಲೆಮಾಡಿದನು. ಈ ಸುದ್ದಿ ಜರಿಮಲೆಯಲ್ಲಿದ್ದ ಮಲ್ಲಿಕಾರ್ಜುನ ನಾಯಕನಿಗೆ ತಿಳಿದಾಗ ತಮ್ಮ ತಂದೆಗಾದ ಗತಿ ತಮಗೂ ಬರಬಹುದು ಎಂದು ಆಲೋಚನೆ ತನ್ನ ಸೋದರ ಬೊಮ್ಮಣ್ಣನಾಯಕನಿಗೆ ದುರ್ಗದಿಂದ ತಪ್ಪಿಸಿಕೊಂಡು ಬರುವಂತೆ ಸುದ್ಧಿ ಕಳುಹಿಸಿದನು. ತನ್ನ ತಂದೆಯ ಸಾವಿನ ಸುದ್ಧಿ ಕೇಳಿದ ಬೊಮ್ಮಣ್ಣನಾಯಕನು ದುರ್ಗದವರು ವಿಶ್ವಾಸದ್ರೋಹಿಗಳೆಂದು ಭಾವಿಸಿ ಜರಿಮಲೆಗೆ ತಪ್ಪಿಸಿಕೊಂಡು ಹೋದನು. ಸೋದರರಿಬ್ಬರು ದುರ್ಗದವರ ಬಗೆಗೆ ಎಚ್ಚರವಿರಬೇಕೆಂದು ಭಾವಿಸಿ ತನ್ನ ಸಂಸ್ಥಾನದ ರಕ್ಷಣೆಗೆ ಹೈದರಾಲಿಗೆ ದುರ್ಗದ ನಾಯಕನ ವಿಶ್ವಾಸದ್ರೋಹಿತನವನ್ನು ವಿವರಿಸಿ ಪತ್ರ ಬರೆದನು. ಇದಕ್ಕೆ ಹೈದರಾಲಿಯು ಕೊಟ್ಟ ಉತ್ತರ ಹೀಗಿತ್ತು. "ನೀವೇನು ಯಾವುದಕ್ಕೂ ಹೆದರಬೇಡಿ ಪಟ್ಟಣಕ್ಕೆ ಭೇಟಿ ನೀಡಿ ನಾನು ನಿಮ್ಮ ಸಮಸ್ಯೆಯನ್ನು ಬಗೆಹರಿಸುತ್ತೇನೆ" ಆದುದರಿಂದ ಜರಿಮಲೆಯ ಸೋದರರಿಬ್ಬರೂ ಶ್ರೀರಂಗಪಟ್ಟಣಕ್ಕೆ ಹೋಗಿ ವೈಯಕ್ತಿಕವಾಗಿ ಹೈದರಾಲಿಯನ್ನು ಭೇಟಿ ಮಾಡಿ ಎಲ್ಲಾ ವಿಚಾರಗಳನ್ನು ವಿವರಿಸಿದರು. ಇದರಿಂದ ಸಂತೃಪ್ತಿಗೊಂಡ ಹೈದರನು ಅವರನ್ನು ಕೆಲಕಾಲ ತನ್ನ ಬಳಿಯೇ ಇಟ್ಟುಕೊಂಡು ರಕ್ಷಣೆ ನೀಡಿದನು.

ಚಿತ್ರದುರ್ಗದವರನ್ನು ಸೋಲಿಸಿಲೇಬೇಕೆಂಬ ಛಲದಿಂದ ಹೈದರಾಲಿಯು ಕೊನೆ ಬಾರಿಗೆ ದುರ್ಗಕ್ಕೆ ಮುತ್ತಿಗೆ ಹಾಕಿದನು. ನಾಯಕನ ಸೈನ್ಯದಲ್ಲಿದ್ದ ಕೆಲವು ಕುತಂತ್ರಗಳು ತಮ್ಮ ನಾಯಕನಿಗೆ ಮೋಸ ಮಾಡಿ ಹೈದರನ ಜೊತೆ ಶಾಮೀಲಾದರು. ಕ್ರಿ.ಶ. ೧೭೭೯ ದುರ್ಗ ಹೈದರನ

ವಶವಾಯಿತು. ಮದಕರಿಯನ್ನು ಮತ್ತು ಅವನ ಬಂಧುಗಳನ್ನು ಸೆರೆಹಿಡಿದು ಶ್ರೀರಂಗಪಟ್ಟಣಕ್ಕೆ ಸಾಗಿಸಲಾಯಿತು. ಮದಕರಿಯ ಸೋಲಿನ ಸುದ್ದಿಯಿಂದ ಸಂತೋಷಗೊಂಡ ಜರಿಮಲೆಯವರು ಪುನಃ ತನ್ನ ವಿಚಾರಗಳನ್ನು ಹೈದರನಲ್ಲಿ ಭಿನ್ನವಿಸಿಕೊಂಡರು. ಈ ವೇಳೆಗಾಗಲೇ ಸೆರೆಮನೆಯಲ್ಲಿಯೇ ಜರಿಮಲೆ ಸೋದರರ ತಾಯಿ ಸಾವನ್ನಪ್ಪಿದ್ದಳು. ಅವರ ತಂದೆಯನ್ನು ಕೊಲೆ ಮಾಡಲಾಗಿತ್ತು. ಕಿರಿಯ ಸೋದರನಾದ ಇಮ್ಮಡಿನಾಯಕ ಅವನ ಕುಟುಂಬ ವರ್ಗದವರು ಅಲ್ಲದೆ ಸೆರೆಮನೆಯಲ್ಲಿದ್ದ ಜರಿಮಲೆಯ ಅಧಿಕಾರಿ ವರ್ಗದವರನ್ನೆಲ್ಲಾ ಹೈದರನು ಬಿಡುಗಡೆಗೊಳಿಸಿದನು. ಜರಿಮಲೆಯನ್ನು ನಾಯಕನಿಗೆ ಹಿಂತಿರುಗಿಕೊಟ್ಟು ವರ್ಷವೊಂದಕ್ಕೆ ೩೦೦೦ ಪಗೋಡ ಕಾಣಿಕೆಯನ್ನು ಒಪ್ಪಿಸುವಂತೆ ಆಜ್ಞಾಪಿಸಿದನು. ಬೊಮ್ಮಣ್ಣನಾಯಕನು ತನ್ನ ಪರಿವಾರದೊಂದಿಗೆ ಜರಿಮಲೆಗೆ ತೆರಳಿ ಮೊದಲಿನಂತೆ ಆಡಳಿತ ನಡೆಸತೊಡಗಿದನು.

ಹೈದರಾಲಿಯ ಜೊತೆ ಅನೇಕ ಕದನಗಳಲ್ಲಿ ಭಾಗಿಯಾಗಿದ್ದ ಜರಿಮಲೆಯವರು ಮೈಸೂರಿನವರ ಆಪ್ತಮಿತ್ರರಾಗಿದ್ದರು. ಕ್ರಿ.ಶ. ೧೭೮೦ರಲ್ಲಿ ಪಾಲ್ಗಟಿನ ಮೇಲೆ ಧಾಳಿ ನಡೆದ ಸಂದರ್ಭದಲ್ಲಿ ಜರಿಮಲೆಯ ಬೊಮ್ಮಣ್ಣನಾಯಕನು ೧೦೦೦ ಕಾಲಾಳು ಮತ್ತು ೧೦೦ ಅಶ್ವಗಳೊಂದಿಗೆ ಹೈದರಾಲಿಗೆ ಸಹಾಯ ಮಾಡಿ ಅವನ ಆಪ್ತ ವರ್ಗದವರಲ್ಲಿ ಒಬ್ಬನಾದನು. ಹೈದರಾಲಿಯ ಮರಣದ ತರುವಾಯ ಅವನ ಮಗ ಟಿಪ್ಪುಸುಲ್ತಾನನು ಶ್ರೀರಂಗಪಟ್ಟಣದಲ್ಲಿ ಅಧಿಕಾರಕ್ಕೆ ಕ್ರಿ.ಶ. ೧೭೮೨ರಲ್ಲಿ ಬಂದನು. ಪಾಳೆಯ ಪಟ್ಟುಗಳ ಕಡುವಿರೋಧಿಯಾಗಿದ್ದ ಟಿಪ್ಪುಸುಲ್ತಾನನು ಮರಾಠರ ದಾಳಿಗೆ ಸಿಕ್ಕ ಜರ್ಜರಿತವಾಗಿದ್ದ ಜರಿಮಲೆ ಮತ್ತು ಅದರ ಸುತ್ತಲಿನ ಪ್ರಾಂತ್ಯಗಳ ಮೇಲೆ ದಾಳಿ ಮಾಡಿ ಹರಪನಹಳ್ಳಿ, ರಾಯದುರ್ಗ, ಸಿರುಗುಪ್ಪ, ಹುಮ್ನಾಗರ ಮುಂತಾದ ಪ್ರದೇಶಗಳನ್ನು ಕೊಳ್ಳೆ ಹೊಡೆದನು. ನಂತರ ಮುಂದುವರಿದು ಜರಿಮಲೆಯ ಮೇಲೆ ಆಕ್ರಮಣ ಮಾಡಿ ಅಲ್ಲಿ ಕೆಲಕಾಲ ತಂಗಿದ್ದನು. ಜರಿಮಲೆಯು ಎಲ್ಲಾ ದೃಷ್ಟಿಯಿಂದಲೂ ಆಯಕಟ್ಟಿನ ಸ್ಥಳ. ಮರಾಠರ ದಾಳಿಯನ್ನು ಸಮರ್ಥವಾಗಿ ಎದುರಿಸಬೇಕಾದರೆ ಇದನ್ನು ಗಡಿ ಕೇಂದ್ರವಾಗಿಟ್ಟುಕೊಂಡರೆ ಸಾಧ್ಯವಾಗುತ್ತದೆ ಎಂದು ಭಾವಿಸಿ ಅಲ್ಲಿ ರಕ್ಷಣಾ ಪಡೆಯನ್ನಿಡಲು ನಿರ್ಧರಿಸಿ ಜರಿಮಲೆ ನಾಯಕರಿಗೆ ನಿರೂಪವನ್ನು ಕಳುಹಿಸಿದನು. "ನೀವು ನನ್ನ ಹಾಗೂ ಸರ್ಕಾರದ ಹಿತೈಷಿಗಳು ನೀವು ಬಹಳ ದೂರದಲ್ಲಿರುವುದಕ್ಕಿಂತ ನನ್ನ ಬಳಿ ಇರುವುದು ಉತ್ತಮ. ಆದ್ದರಿಂದ ತಾವು ತಮ್ಮ ಕುಟುಂಬದವರೊಂದಿಗೆ ಶ್ರೀರಂಗಪಟ್ಟಣಕ್ಕೆ ಬರುವುದು ಒಳಿತು." ಟಿಪ್ಪುವಿನ ಮಾತಿನ ಅರ್ಥವನ್ನು ಸರಿಯಾಗಿ ಗ್ರಹಿಸದ ನಾಯಕರು ಅವನು ಬೀಸಿದ ಬಲೆಯಲ್ಲಿ ಬಿದ್ದು ಶ್ರೀರಂಗಪಟ್ಟಣಕ್ಕೆ ಆಗಮಿಸಿದರು. ಟಿಪ್ಪುಸುಲ್ತಾನನು ಹಿರೇಕೊಟ್ಟೂರು ಸಂಮತ್‌ಗೆ ಸೇರಿದ ಹರದನಹಳಳಿ ಮತ್ತು ಯಡೆತೊರೆ ಗ್ರಾಮಗಳನ್ನು ದತ್ತಿಯಾಗಿ ನೀಡಿದ ನಂತರ ದತ್ತಿಯನ್ನು ಕಿತ್ತುಕೊಂಡು ಅವನನ್ನು ೧೭೮೭ರಲ್ಲಿ ಭಕ್ತಿಯನ್ನಾಗಿ ತಿಂಗಳಿಗೆ ೩೦೦ ರೂಗಳ ವೇತನದ ಮೇಲೆ ನೇಮಕ ಮಾಡಿಕೊಂಡನು. ಹೀಗೆ ಮೋಸದಿಂದ ಜರಿಮಲೆಯನ್ನು ಪಡೆದುಕೊಂಡ ನಂತರ ಕೆಲ ದಿನಗಳಲ್ಲಿಯೇ ಜರಿಮಲೆ ನಾಯಕರ ಕುಟುಂಬವನ್ನು ಇಸ್ಲಾಂ ಧರ್ಮವನ್ನು ಸ್ವೀಕರಿಸುವಂತೆ ಒತ್ತಾಯಿಸಿದನು. ಇಲ್ಲದಿದ್ದರೆ

ಕೊಲೆ ಮಾಡುವ ಬೆದರಿಕೆ ಹಾಕಿದನು. ಮತಾಂತರಗೊಳ್ಳಲು ಒಪ್ಪದ ನಾಯಕರು ಅಲ್ಲಿಂದ ತಪ್ಪಿಸಿಕೊಳ್ಳಲು ನಿರ್ಧರಿಸಿ, ಅವರು ತಮ್ಮವರೊಂದಿಗೆ ಸುರಕ್ಷಿತವಾಗಿ ತಮ್ಮ ಸಂಬಂಧಿಕರ ಸಂಸ್ಥಾನವಾದ ಸುರಪುರಕ್ಕೆ ಪಲಾಯನ ಮಾಡಿದರು. ಮೂರನೇ ಮೈಸೂರು ಯುದ್ಧದಲ್ಲಿ ಬ್ರಿಟಿಷರು ನಿಜಾಮ ಮತ್ತು ಮರಾಠರೊಂದಿಗೆ ಒಕ್ಕೂಟ ಮಾಡಿಕೊಂಡು ಟಿಪ್ಪುಸುಲ್ತಾನನನ್ನು ಕ್ರಿ.ಶ. ೧೭೯೨ರಲ್ಲಿ ಸೋಲಿಸಿದರು.

ತನ್ನ ಶತ್ರು ಸೋತನೆಂಬ ಸುದ್ಧಿ ತಿಳಿದನಾಯಕರು ಮರಾಠರ ಬಳಿ ಹೋಗಿ ೨೦,೦೦೦ ಸಾವಿರ ರೂ.ಗಳ ಖಂಡಣಿ ಹಣ ನೀಡಿ ಜರಿಮಲೆಯನ್ನು ವಾಪಾಸ್ ಪಡೆದುಕೊಂಡರು. ನಿಜಾಮ ಮತ್ತು ಬ್ರಿಟೀಷರ ಸ್ನೇಹ ಬಹಳ ಕಾಲ ಉಳಿಯಲಿಲ್ಲ. ನಿಜಾಮನು ಮರಾಠರೊಂದಿಗೆ ಯುದ್ಧ ಮಾಡುವಾಗ ಇಂಗ್ಲೀಷರು ಅವನಿಗೆ ಸಹಾಯ ಮಾಡದೆ ಕೈಬಿಟ್ಟರು. ಈ ಯುದ್ಧದಲ್ಲಿ ಟಿಪ್ಪುವು ತಟಸ್ಥನಾಗಿದ್ದುದರಿಂದ ನಿಜಾಮನಿಗೆ ನೆಮ್ಮದಿಯಾಯಿತು. ಟಿಪ್ಪುಸುಲ್ತಾನನೇನಾದರೂ ಮೂರನೇ ಮೈಸೂರು ಯುದ್ಧದಲ್ಲಿ ತನಗಾದ ನಷ್ಟವನ್ನು ತುಂಬಿಕೊಳ್ಳಲು ಯುದ್ಧರಂಗಕ್ಕೆ ಬಂದಿದ್ದರೆ, ನಿಜಾಮನ ಸ್ಥಿತಿ ಶೋಚನೀಯವಾಗುತ್ತಿತ್ತು. ಟಿಪ್ಪುಸುಲ್ತಾನನ ತಾಟಸ್ಥ ಹಾಗೂ ಬ್ರಿಟೀಷರ ವಂಚನೆಗಳಿಂದಾಗಿ ನಿಜಾಮನು ಟಿಪ್ಪುಸುಲ್ತಾನನೊಂದಿಗೆ ಸಂಧಿ ಮಾಡಿಕೊಳ್ಳಲು ಬಯಸಿದನು. ಇಬ್ಬರ ನಡುವೆ ಮಿತ್ರತ್ವ ಏರ್ಪಟ್ಟಿತು. ನಿಜಾಮನು ಬ್ರಿಟೀಷರಿಗೆ ಸೇರಿದ್ದ ಪ್ರಾಂತ್ಯಗಳನ್ನು ಕೊಳ್ಳೆ ಹೊಡೆಯಲಾರಂಭಿಸಿದಾಗ ಜರಿಮಲೆಯ ಮೇಲೂ ಕಾಡು ಆಕ್ರಮಣ ಮಾಡಿದನು. ಈ ಸನ್ನಿವೇಶದಲ್ಲಿ ನಿಜಾಮನು ಜರಿಮಲೆ ನಾಯಕರಿಗೆ ಜರಿಮಲೆಯನ್ನು ತೆರವು ಮಾಡಿ ಕೋಟೆಯನ್ನು ಟಿಪ್ಪುಸುಲ್ತಾನನಿಗೆ ಒಪ್ಪಿಸಬೇಕೆಂದು ಪತ್ರವೊಂದನ್ನು ಬರೆದನು. ಅದರ ಪ್ರಕಾರ ನಾಯಕರು ಸುರಪುರಕ್ಕೆ ಹೋದರು. ಅಲ್ಲಿ ಅವರು ನಿಜಾಮನ ಸೇವೆಗೆ ಸೇರಿಕೊಂಡರು.

ಕ್ರಿ.ಶ. ೧೭೯೯ರ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಹತನಾದನು. ಅವನು ರಾಜ್ಯವನ್ನು ಬ್ರಿಟೀಷರು ಹಂಚಿದಾಗ ಜರಿಮಲೆ ಸಂಸ್ಥಾನವು ನಿಜಾಮನಿಗೆ ಸೇರಿತು. ಆ ಸಂಸ್ಥಾನಕ್ಕೆ ನಿಜಾಮನು ಜೆನ್ನೋಡುಖಾನನನ್ನು ಅಧಿಕಾರಿಯಾಗಿ ನೇಮಿಸಿ ಆಡಳಿತ, ನಡೆಸತೊಡಗಿದನು. ಜರಿಮಲೆ ನಾಯಕರು ಸಂಸ್ಥಾನವನ್ನು ತಮಗೆ ಹಿಂತಿರುಗಿಸಬೇಕೆಂದು ತಾವು ನಿರ್ದಿಷ್ಟಪಡಿಸಿದಷ್ಟು ಖಂಡಣಿ ಹಣವನ್ನು ನೀಡುತ್ತೇವೆಂದು ನಿಜಾಮನಿಗೆ ಮನವಿ ಸಲ್ಲಿಸಿದರು. ಅವರ ಮನವಿಯನ್ನು ಪರಿಶೀಲಿಸಿದ ನಿಜಾಮನು ಪೊಗದಿ ಹಣವನ್ನು ನಿಗದಿ ಪಡಿಸಿ ನಾಯಕರಿಗೆ ಜರಿಮಲೆಯ ಆಡಳಿತವನ್ನು ನೀಡುವಂತೆ ಖಾನನಿಗೆ ಆದೇಶಿಸಿದನು.

ನಿಜಾಮನ ಆದೇಶ ಬರುವುದರೊಳಗೆ ಖಾನನು ಜರಿಮಲೆಯಲ್ಲಿದ್ದನು. ಆದೇಶದ ಪ್ರತಿ ತಲುಪಿದ ತಕ್ಷಣ ಖಾನನು ಜರಿಮಲೆ ಪ್ರಾಂತ್ಯದ ಆದಾಯ ಜಮಾಬಂಧಿಯ ವಿವರವನ್ನು ಸಂಗ್ರಹಿಸಲು ತನ್ನ ಅಧಿಕಾರಿಗಳನ್ನು ಕಳುಹಿಸಿದನು. ಆ ಸಮಯದಲ್ಲಿ ಏಳರಿಂದ ಎಂಟು ಸಾವಿರ ರೂ.ಗಳ ಆದಾಯವಿತ್ತು ಆದರೂ ಅವರು ೧೮೦೦ ರೂಗಳನ್ನು ನಿಗದಿಪಡಿಸಬಹುದೆಂದು ವರದಿ ಸಲ್ಲಿಸಿದರು. ನಾಯಕರು ಹೈದರಾಬಾದಿನಲ್ಲಿ ನಿಜಾಮನಿಂದ ಪಡೆದಿದ್ದ ಇನಾಯತ್

ನಾಮ ಮತ್ತು ನೆವಜಜ್ ನಾಮಗಳನ್ನು ಖಾನನಿಗೆ ನೀಡಿದನು. ಅದನ್ನು ಪರಿಶೀಲಿಸಿದ ಖಾನನು ಈ ಪ್ರಾಂತ್ಯ ೧೮೦೦ ರೂಗಳ ದರಕ್ಕೆ ನಿಗದಿಯಾಗಿದೆ. ನೀನೆಷ್ಟು ಹೆಚ್ಚು ಹಣವನ್ನು ಆಸ್ಥಾನಕ್ಕೆ ನೀಡುವೆ ಎಂದು ಕೇಳಿದನು. ಹೀಗೆ ಚರ್ಚೆ ಏರ್ಪಟ್ಟಾಗ ಖಾನನು ಕ್ರಿ.ಶ. ೧೮೦೦ಕ್ಕೆ ೭೦೦೦ ರೂಗಳು ೧೮೦೧ಕ್ಕೆ ೨೦೦೦ರೂಗಳು ನಂತರದ ವರ್ಷಗಳು ಕೂಡ ೨೦೦೦ರೂಗಳನ್ನು ನೀಡಬೇಕೆಂದು ನಿಗದಿಪಡಿಸಿದನು. ಈ ರೀತಿ ಇಬ್ಬರ ಮಧ್ಯೆ ಲಿಖಿತ ಒಪ್ಪಂದವೇರ್ಪಟ್ಟು ಜರಿಮಲೆ ಪ್ರಾಂತ್ಯವನ್ನು ಮೇಲೆ ಹೇಳಿದ ದರಕ್ಕೆ ನಿಗದಿಪಡಿಸಿ ಅದರ ಜವಾಬ್ದಾರಿಯನ್ನು ನಾಯಕರಿಗೆ ನೀಡಿ ವ್ಯವಹಾರವನ್ನು ಬಗೆಹರಿಸಿದನು.

ಜರಿಮಲೆ ಪ್ರಾಂತ್ಯಕ್ಕೆ ಖಾನ್‌ನ ಸ್ಥಾನಕ್ಕೆ ಮೀರ್ ಆಲನ್ ಬಹದ್ದೂರ್‌ನನ್ನು ರೆಸಿಡೆಂಟನನ್ನಾಗಿ ನೇಮಕ ಮಾಡಲಾಯಿತು. ಅವನು ಖಂಡಣಿ ಹಣದ ವಸೂಲಿಗೆ ಜರಿಮಲೆಗೆ ತನ್ನ ಷೆಷ್ಕರ್ ನಾಗಣ್ಣರಾವ್‌ನನ್ನು ಕಳುಹಿಸಿದನು. ಅವನನ್ನು ನಾಯಕನು ಆದರಾತಿಥ್ಯಗಳಿಂದ ಸ್ವಾಗತಿಸಿ ನಿರ್ದಿಷ್ಟಪಡಿಸಿದ ಹಣವನ್ನು ನೀಡಿದಾಗ ಆ ಅಧಿಕಾರಿ ಅದನ್ನು ತಿರಸ್ಕರಿಸಿ ೩೦೦೦ ರೂಗಳನ್ನು ಒತ್ತಾಯಿಸಿದನು. ಅಲ್ಲದೆ ಹಣದ ವಸೂಲಿಗೆ ೧೦೦ ಜನ ಸೈನಿಕರನ್ನು ಕೂಡ ಕರೆತಂದನು. ಹೀಗೆ ಹೈದರಾಬಾದಿನ ನಿಜಾಮರ ಆದೇಶ ಇಲ್ಲದಿದ್ದರೂ ಕೂಡ ಹೆಚ್ಚಿನ ಹಣವನ್ನು ಒತ್ತಾಯಿಸಿ ಲಿಖಿತ ಒಪ್ಪಂದದ ಅಂಶಗಳಿಗೆ ಆ ಅಧಿಕಾರಿ ಅಗೌರವ ತೋರಿಸಿದ್ದರಿಂದ ನಾಯಕನಿಗೆ ಮತ್ತೆ ಸಮಸ್ಯೆಗಳು ಆರಂಭವಾದವು.

ನಿಜಾಮನು ೧೭೯೨ ಹಾಗೂ ೧೭೯೯ರ ಯುದಧದಲ್ಲಿ ಬ್ರಿಟೀಷರಿಂದ ಸಹಾಯ ಪಡೆದುದಕ್ಕಾಗಿ ಕ್ರಿ.ಶ. ೧೮೦೦ರಲ್ಲಿ ತಾನು ಗೆದ್ದುಕೊಂಡಿದ್ದ ಪ್ರಾಂತ್ಯಗಳನ್ನು ಬಿಟ್ಟುಕೊಡಲು ಒಪ್ಪಿದನು. ಬಳ್ಳಾರಿ, ಅನಂತಪುರ, ಕಡಪ, ಕರ್ನೂಲ್‌ನ ಒಂದು ಭಾಗ ಬ್ರಿಟೀಷರಿಗೆ ಹಸ್ತಾಂತರವಾದವು. ಇವುಗಳನ್ನು Ceded Districts ಎನ್ನುವರು. ಈ ಜಿಲ್ಲೆಗಳಿಗೆ ಮೇಜರ್ ಮನ್ರೋನು ಮುಖ್ಯ ಕಲೆಕ್ಟರ್ ಆಗಿ ನೇಮಕವಾದನು. ೧೮೦೦ರಲ್ಲಿ ಆಗಮಿಸಿದ ಮನ್ರೋ ಅನಂತಪುರದಲ್ಲಿ ಅಧಿಕಾರ ವಹಿಸಿಕೊಂಡನು. ಬಳ್ಳಾರಿಯ ವ್ಯಾಪ್ತಿಗೆ ಸೇರಿದ ಜರಿಮಲೆ ಮತ್ತು ಕೂಡಲಗಿಗಳು ಮನ್ರೋನ ಆಡಳಿತಕ್ಕೊಳಪಟ್ಟವು. ಈ ಪ್ರಾಂತ್ಯಗಳ ಉಸ್ತುವಾರಿ ನೋಡಿಕೊಳ್ಳಲು ರಾಯದುರ್ಗದ ಅಮಲ್ದಾರನಾಗಿದ್ದ ಶಾಮರಾವ್‌ನನ್ನು ನೇಮಕ ಮಾಡಿ ಆದೇಶ ಹೊರಡಿಸಿದನು. ಅಧಿಕಾರಿಯಾಗಿದ್ದ ಶಾಮರಾವ್ ಜರಿಮಲೆ ನಾಯಕನಿಗೆ ಸರಿಯಾದ ಲೆಕ್ಕಪತ್ರಗಳ ಸಮೇತ ಜರಿಮಲೆಯನ್ನು ಇಂಗ್ಲೀಷರಿಗೆ ಒಪ್ಪಿಸಬೇಕೆಂದು ಅಮೀಲ್‌ನ ಸಂಗಡ ಪತ್ರವೊಂದನ್ನು ರವಾನಿಸಿದನು. ಆದೇಶದಿಂದ ಧೃತಿಗೆಟ್ಟ ನಾಯಕನು ಲೆಕ್ಕಪತ್ರಗಳನ್ನು ನೀಡದೆ ಜರಿಮಲೆಯನ್ನು ಕಂಪನಿಗೆ ಹಸ್ತಾಂತರಿಸಿ ವೇತನ ಕೋರಿದನು.

ಜರಿಮಲೆಯ ಕೂಡಲಗಿಗೆ ಸೇರಿದ ಮೇಲೆ ವೆಂಕಟರಾವ್ ಆ ತಾಲೂಕಿನ ಅಮಲ್ದಾರ ರಾದರು. ಈ ಅಧಿಕಾರಿಯು ಜರಿಮಲೆಯ ನಾಯಕರು ಪಟೇಲ, ಶ್ಯಾನುಭೋಗ ನಾಡಗೌಡರಿಗೆ ಸಂಸ್ಥಾನದ ಲೆಕ್ಕಪತ್ರಗಳ ವರದಿಯನ್ನು ಧರ್ಮಾವರಂಗೆ ಬಂದು ಆದಷ್ಟು ಬೇಗ ಒಪ್ಪಿಸುವಂತೆ

ನಿರ್ದೇಶಿಸಿದನು. ಅವನು ತನ್ನ ಅಧಿಕಾರಿಗಳೊಂದಿಗೆ ತೆರಳಿ ಲೆಕ್ಕವನ್ನು ಕಂಪನಿಗೆ ನೀಡಿದರೂ ಕೂಡ ನಾಯಕನ ವಿಶ್ರಾಂತಿವೇತನ ನಿಗದಿಯಾಗದೆ ಹಾಗೇ ಉಳಿಯಿತು. ಜರಿಮಲೆ ಮಾತ್ರ ಈಸ್ಟ್ ಇಂಡಿಯಾ ಕಂಪನಿಗೆ ೧೮೦೧ರಲ್ಲಿ ಸೇರಿತು.

## ಅಸ್ತಿತ್ವಕ್ಕಾಗಿ ಹೋರಾಟ

ವಿಜಾಪುರದ ಸುಲ್ತಾನನಿಂದ ಬಿರುದು ಪಡೆದುಕೊಂಡಿದ್ದು ಜರಿಮಲೆಯವರು ಸುಲ್ತಾನರಿಗೆ ಅವಿಧೇಯವಾಗಿ ನಡೆದುಕೊಂಡು ನಗರದವರ ಜೊತೆ ಸೇರಿಕೊಂಡಿದ್ದರಿಂದ ಅವರನ್ನು ಶಿಕ್ಷಿಸಲು ಸೇನಾಸಮೇತರಾಗಿ ಬಂದರು. ಆವೇಳೆಗೆ ಭೂಮಿರಾಜ ಮತ್ತು ಆತನ ಸೋದರರು ಮರಣ ಹೊಂದಿದ್ದು ಇಮ್ಮಡಿ ನಾಯಕನು ಆಳ್ವಿಕೆ ಮಾಡುತ್ತಿದ್ದನು. ವಿಜಾಪುರದ ಸುಲ್ತಾನನು ಉಜ್ಜಯನಿಗೆ ಮುತ್ತಿಗೆ ಹಾಕಿ ನಾಯಕನನ್ನು ಸೆರೆಹಿಡಿದನು. ನಂತರ ತಮ್ಮ ಸೇನೆಯ ಒಂದು ತುಕಡಿಯನ್ನು ಅಲ್ಲಿ ಇಟ್ಟು ನಗರದವರ ವಿರುದ್ಧ ಹೊರಟನು ಅವರನ್ನು ಶಿಕ್ಷಿಸಿದರು. ಈ ಅವಧಿಯಲ್ಲಿ ಇಮ್ಮಡಿ ನಾಯಕನಿಗೆ ಉಜ್ಜಯನಿಯನ್ನು ಹಿಂತಿರುಗಿ ಪಡೆದುಕೊಳ್ಳಲಿಕ್ಕೆ ಹಣ ನೀಡಬೇಕೆಂದು ಒತ್ತಾಯಿಸಿದಾಗ ಅದನ್ನು ಸಂದಾಯ ಮಾಡುವುದಕ್ಕೆ ಇಮ್ಮಡಿನಾಯಕನು ಪ್ರಯತ್ನ ಮಾಡುತ್ತಿದ್ದನು. ಅವಕಾಶಕ್ಕಾಗಿ ಕಾಯುತ್ತಿದ್ದ ಹರಪನಹಳ್ಳಿ ನಾಯಕರು ಆ ವಿಜಾಪುರದವರಿಗೆ ೭೦೦ ಪಗೋಡ ಹಣವನ್ನು ನೀಡಿ ಉಜ್ಜಯನಿಯನ್ನು ಪಡೆದುಕೊಂಡರು. ಹೀಗೆ ಉಜ್ಜಯನಿಯನ್ನು ಕಳೆದುಕೊಂಡ ಇಮ್ಮಡಿ ನಾಯಕನು ಹರಪನಹಳ್ಳಿಯವರ ವಿರುದ್ಧ ಒಳಗೇ ದ್ವೇಷ ಸಾಧಿಸುತ್ತಾ ತನ್ನ ಮತ್ತೊಂದು ಜಾಗೀರಾದ ಕೂಡಲಗಿಗೆ ಆಗಮಿಸಿದನು. ಇದೇ ಸಮಯದಲ್ಲಿ ಚಿತ್ರದುರ್ಗದ ನಾಯಕರು ಇಮ್ಮಡಿ ನಾಯಕನಿಗೆ ಸೇರಿದ ಕಣಕುಪ್ಪೆಯ ಮೇಲೆ ಆಕ್ರಮಣ ಮಾಡಿ ಗೆದ್ದುಕೊಂಡರು.

ಚಿತ್ರದುರ್ಗದವರ ಶಕ್ತಿಯನ್ನು ಅರಿತಿದ್ದು ಇಮ್ಮಡಿನಾಯಕನು ಅವರ ಜೊತೆ ಸಂಘರ್ಷವನ್ನು ಮಾಡಲಿಚ್ಛಿಸದೆ ಸ್ನೇಹವೇಲೇಸೆಂದು ಬಗೆದು ದುರ್ಗದವರನ್ನು ಗೌರವಿಸಲಿಕ್ಕೆ ಕೂಡಲಗಿಯಿಂದ ಭೂಪಸಮುದ್ರಕ್ಕೆ ಹೋದನು. ಈ ಅವಕಾಶವನ್ನುಪಯೋಗಿಸಿಕೊಂಡ ಹರಪನಹಳ್ಳಿ ನಾಯಕರು ಕೂಡಲಗಿಯನ್ನು ಆಕ್ರಮಿಸಿಕೊಂಡರು. ತನ್ನ ತಂದೆಯಿಂದ ಪಡೆದುಕೊಂಡಿದ್ದ ಎಲ್ಲಾ ಭಾಗಗಳನ್ನು ಕಳೆದುಕೊಂಡು ಇಮ್ಮಡಿನಾಯಕನು ನೆಲೆಯಿಲ್ಲದೆ ಅಲೆದಾಡುವಂತಾಯಿತು. ತನ್ನ ಸುರಕ್ಷತೆಗೋಸ್ಕರ ಭದ್ರವಾದ ಸ್ಥಳವನ್ನು ಹುಡುಕತೊಡಗಿದನು. ಅವನು ಈಗಿನ ಜರಿಮಲೆ ಎಂಬ ಸ್ಥಳಕ್ಕೆ ಬಂದು ಅದನ್ನು ತನ್ನ ರಕ್ಷಣೆಗೆ ಸೂಕ್ತ ಸ್ಥಳವೆಂದು ತಿಳಿದುಕೊಂಡು, ಚಿತ್ರದುರ್ಗದ ನಾಯಕರೊಂದಿಗೆ ಮಾತುಕತೆ ನಡೆಸಿ ಶಾಂತಿ ಒಪ್ಪಂದ ಮಾಡಿಕೊಂಡನು. ಸ್ನೇಹವು ವೈವಾಹಿಕ ಸಂಬಂಧಕ್ಕೆ ತಿರುಗಿ ಚಿತ್ರದುರ್ಗ ನಾಯಕ ಮನೆತನಕ್ಕೆ ಅಳಿಯನಾದನು. ದುರ್ಗದವರ ಬೆಂಬಲವನ್ನು ಅವರ ಸಂಬಂಧವನ್ನು ಪಡೆದುಕೊಂಡಿದ್ದ ಈತನು ತನ್ನ ಸುತ್ತಲಿನ ಪಾಳೆಯಗಾರರ ಭೀತಿಯಿಂದ ಪಾರಾಗಿ ಧೈರ್ಯದಿಂದ ಜರಿಮಲೆಯಲ್ಲಿ ಕೋಟೆಯನ್ನು ಅರಮನೆಯನ್ನು ನಿರ್ಮಾಣ ಮಾಡಿ ಜನರು ವಾಸಿಸುವುದಕ್ಕೆ ಎಲ್ಲಾ ರೀತಿಯ ಅನುಕೂಲ ಮಾಡಿಕೊಟ್ಟನು. ಹಟ್ಟಿನಾಯಕ ಮನೆತನದ ಮಲ್ಲಪ್ಪನಾಯಕನ ಮಗಳನ್ನು ವಿವಾಹವಾಗಿ ಜರಿಮಲೆಯಲ್ಲಿ ನಿರಾತಂಕವಾಗಿ ಯಾವ ಪಾಳೇಗಾರರ

ವಿರೋಧವಿಲ್ಲದೆ ಕೆಲಕಾಲ ರಾಜ್ಯವಾಳಿದನು. ಅಂದಿನ ರಾಜಕೀಯ ಸನ್ನಿವೇಶದಲ್ಲಿ ಇಮ್ಮಡಿ ನಾಯಕನು ಕ್ರಮ ಸರಿಯಾದುದೇ ಆಗಿದೆ. ಇವನ ಇಬ್ಬರು ಪತ್ನಿಯರಲ್ಲಿ ಬೊಮ್ಮಂತರಾಜ ಮತ್ತು ಕಿರಿ ಇಮ್ಮಡಿನಾಯಕ ಎಂಬ ಇಬ್ಬರು ಮಕ್ಕಳು ಜನಿಸಿದರು. ಅಕಾಲ ಮರಣಕ್ಕೀಡಾದ ಬೊಮ್ಮಂತರಾಜನ ಉತ್ತರಾಧಿಕಾರಿಯಾಗಿ ಕಿರಿ ಇಮ್ಮಡಿನಾಯಕನು ಜರಿಮಲೆ ಸಂಸ್ಥಾನದ ನಾಯಕನಾಗಿ ಆಳ್ವಿಕೆ ನಡೆಸಿದನು. ಶತ್ರುಗಳಾಗಿದ್ದ ಹರಪನಹಳ್ಳಿ ಪಾಳೆಯಗಾರರು ಜರಿಮಲೆಯವರಿಗೆ ಪದೇ ಪದೇ ಕಿರುಕುಳ ಕೊಡಲಾರಂಭಿಸಿದರು. ನಂತರ ಬಂದ ಬೊಮ್ಮಣ್ಣನಾಯಕನ ಕಾಲದಲ್ಲಿ ಇದು ಹೆಚ್ಚಾಯಿತು. ಹರಪನಹಳ್ಳಿಯವರೇ ಅಲ್ಲದೇ ಚಿತ್ರದುರ್ಗದವರೂ ಕೂಡ ಜರಿಮಲೆಯವರಿಗೆ ತೊಂದರೆ ಕೊಡಲಾರಂಭಿಸಿದರು. ಚಿತ್ರದುರ್ಗದ ಚಿಕ್ಕಣ್ಣನಾಯಕನು (೧೬೭೫–೧೬೮೬) ಜರಿಮಲೆಯವರಿಗೆ ಸೇರಿದ್ದ ಉಜ್ಜಯನಿ ದುರ್ಗದ ಮೇಲೆ ಆಕ್ರಮಣ ಮಾಡಿದನು. ದುಗರ್ದ ದಂಡನ್ನು ಎದುರಿಸುವಷ್ಟು ಬಲ ಹೊಂದಿಲ್ಲದ ಜರಿಮಲೆಯ ಬೊಮ್ಮಣ್ಣನಾಯಕನು ಅವರೊಂದಿಗೆ ಸಂಧಾನ ನಡೆಸಿ ಉಜ್ಜಯನಿಯನ್ನು ವಾಪಾಸ್ ಪಡೆದುಕೊಂಡನು. ಅವಕಾಶವಾದಿಗಳಾಗಿದ್ದ ಹರಪನಹಳ್ಳಿ ನಾಯಕರು ಉಜ್ಜಯನಿಯನ್ನು ಪಡೆದೇತೀರಬೇಕೆಂಬ ಛಲದಿಂದ ಬಿದನೂರಿನವರ ಜೊತೆ ಕೈ ಜೋಡಿಸಿದರು. ಇಬ್ಬರೂ ಒಟ್ಟಾಗಿ ಜರಿಮಲೆಯವರ ಮೇಲೆ ಆಕ್ರಮಣ ಮಾಡಿದರು. ಬೊಮ್ಮಣ್ಣ ನಾಯಕನ ಸಹಾಯಕ್ಕೆ ಚಿತ್ರದುರ್ಗದ ಸೇನೆ ಆಗಮಿಸಿತು. ಕ್ರಿ.ಶ. ೧೬೮೫ರ ಕಾರ್ತೀಕ ಶುದ್ಧದಲ್ಲಿ ಉಜ್ಜಿನಿಯ ಕೋಟೆಯನ್ನು ೧೨ ದಿನಗಳು ಮುತ್ತಿ ಊರನ್ನು ತೆಗೆದುಕೊಂಡರು. ಆ ಯುದ್ಧದಲ್ಲಿ ದುರ್ಗದ ದಂಡು ಸೋತುಹೋಯಿತು. ಆ ಕೋಟೆಯಲ್ಲಿದ್ದ ಜರಿಮಲೆಯ ಬೊಮ್ಮಣ್ಣನಾಯಕನನ್ನು ಹರಪನಹಳ್ಳಿಯವರು ಖೈದಿಯಾಗಿ ಹಿಡಿದುಕೊಂಡರು. ೩–೪ ತಿಂಗಳ ಮೇಲೆ ಬಿಟ್ಟರು. ಬೊಮ್ಮಣ್ಣನಾಯಕನ ದುರ್ಬಲತೆಯ ಲಾಭವನ್ನು ಪಡೆದುಕೊಂಡ ಮರಾಠರ ದಂಡನಾಯಕ ಸಿದ್ದಾಜಿ ಗೋರ್ಪಡೆಯು ಕ್ರಿ.ಶ. ೧೭೨೮ರಲ್ಲಿ ಗುತ್ತಿಯಿಂದ ಬಂದು ಸೊಂಡೂರು, ಕುಡತಿನಿ ಮುಂತಾದ ಪ್ರದೇಶಗಳ ಮೇಲೆ ಆಕ್ರಮಣ ಮಾಡಿ ಗೆದ್ದುಕೊಂಡು ೮ ವರ್ಷಗಳ ಚೌತ್ ನೀಡುವಂತೆ ಒತ್ತಾಯಿಸಿದನು. ಇದೇ ಸಮಯದಲ್ಲಿ ಹರಪನಹಳ್ಳಿಯವರು ಕೂಡ ಕ್ರಿ.ಶ. ೧೭೪೨ರಲ್ಲಿ ಜರಿಮಲೆಯವರ ನಾರಾಯಣದೇವರಕೆರೆ, ಡಣಾಯಕನಕೆರೆ ಪ್ರದೇಶಗಳನ್ನು ವಶಪಡಿಸಿಕೊಂಡರು. ಹೀಗೆ ಬೊಮ್ಮಣ್ಣನಾಯಕನು ತನ್ನ ಪೂರ್ವಜರಿಂದ ಬಳುವಳಿಯಾಗಿ ಪಡೆದಿದ್ದ ಪ್ರಾಂತ್ಯಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಹೋರಾಟ ಮಾಡಿ ದುರ್ಗದವರ ಸ್ನೇಹ ಸಂಪಾದಿಸಿದರೂ ಕೂಡ ಗಳಿಸಿದ್ದುದಕ್ಕಿಂತ ಕಳೆದುಕೊಂಡುದೇ ಹೆಚ್ಚಾಯಿತು. ಇವನಿಗೆ ಮುಮ್ಮಡಿ ನಾಯಕ ಮತ್ತು ಇಮ್ಮಡಿನಾಯಕ ಎಂಬ ಇಬ್ಬರು ಪುತ್ರರಿದ್ದರು. ಇಮ್ಮಡಿನಾಯಕನು ಜರಿಮಲೆ ಸಂಸ್ಥಾನದ ನಾಯಕನಾದನು. ಇವನಿಗೆ ಬೊಮ್ಮಣ್ಣನಾಯಕ, ಮಲ್ಲಿಕಾರ್ಜುನನಾಯಕ, ಇಮ್ಮಡಿನಾಯಕ ಎಂಬ ಮೂರು ಜನ ಪುತ್ರರಿದ್ದರು. ಇವನ ಕಾಲ ಜರಿಮಲೆಯವರಿಗೆ ಅತಿ ಸಂಕಷ್ಟದ ಕಾಲ ಎನ್ನಬಹುದು. ಚಿತ್ರದುರ್ಗದ ನಾಯಕರು ಜರಿಮಲೆಯ ದಂಡನಾಯಕ ಶಂಕರದೇವರ ಹಂಪಣ್ಣನನ್ನು ಸೇನಾಸಮೇತ ದುರ್ಗಕ್ಕೆ ಕಳುಹಿಸುವಂತೆ ಇಮ್ಮಡಿನಾಯಕನಿಗೆ

ಕೋರಿದಾಗ ಅದನ್ನು ಅವನು ತಿರಸ್ಕರಿಸಿದನು. ಅಲ್ಲದೆ ದುರ್ಗದ ಗಡಿ ಪ್ರದೇಶಗಳಲ್ಲಿ ದಾಂಧಲೆ ಆರಂಭಿಸಿದನು. ಇದರಿಂದ ಕೋಪಗೊಂಡ ರಾಜವೀರ ಮದಕರಿನಾಯನು (ಕ್ರಿ.ಶ. ೧೭೫೪-೧೭೭೯) ಜರಿಮಲೆಯ ಮೇಲೆ ದಂಡೆತ್ತಿ ಬಂದನು. ಮುತ್ತಿಗೆ ಹಲವಾರು ದಿನಗಳ ಕಾಲ ಮುಂದುವರಿಯಿತು. ಜರಿಮಲೆಯ ಕೋಟೆ ಬಾಗಿಲು ತೆರೆಯಿತು. ಜನರಿಗೆ ಯಾವುದೇ ರೀತಿಯ ತೊಂದರೆ ಕೊಡದೆ ನಾಯಕ ಕುಟುಂಬದವರನ್ನೆಲ್ಲಾ ಸೆರೆಹಿಡಿಯಲಾಯಿತು. ಅವರನ್ನು ಚಿತ್ರದುರ್ಗದ ಕೋಟೆಗೆ ಕರೆತಂದು ಸೆರೆಯಲ್ಲಿಟ್ಟನು. ಕೆಲವು ದಿನಗಳ ನಂತರ ಇಮ್ಮಡಿನಾಯಕನ ಮಕ್ಕಳಾದ ಬೊಮ್ಮಣ್ಣನಾಯನ ಮತ್ತು ಮಲ್ಲಿಕಾರ್ಜುನ ನಾಯಕನನ್ನು ಸೆರೆಯಿಂದ ಬಿಡುಗಡೆ ಮಾಡಿ ಜರಿಮಲೆಗೆ ಕಳುಹಿಸಿದನು. ಮತ್ತು ೫೦೦ ಕಾಲಾಳು ಪಡೆಯೊಂದಿಗೆ ದುರ್ಗದವರಿಗೆ ಸೇವೆ ಸಲ್ಲಿಸಲು ಷರತ್ತಿಗೆ ಒಪ್ಪಿದರು.

ಕೊಮಾರರಾಮನ ವಂಶಸ್ಥನಾದ ದಳವಾರ ಮರಳೆ ಭೂಮಿರಾಜ ಕೃಷ್ಣರಾಯರಿಗೆ ಭಿನ್ನಹ ಪೂರ್ವದಲ್ಲಿ ನಮ್ಮಾಗೆ ನಾಡದಳವಾರಿಕೆ ಕೌಲಸ್ವಾಸ್ತಿಗೆ ಜಹಗೀರು ಸುದ್ದಾನಡವುತ್ತಾಯಿತ್ತು. ಆದ ಪಾಲಿಸಿದರೆ ದಯಪಾಲಿಸಬೇಕೆಂದು ಭಿನ್ನಹ ಮಾಡಿಕೊಳ್ಳುವಾಗ ಆದ ಮೇರೆಗೆ ಕೃಷ್ಣರಾಯರು ಸಂತೋಷದಿಂದ ಕೊಟ್ಟ ತಾಲ್ಲೂಕು ವಿವರ. ೧. ಕುತ್ತಾನೆ, ೧ ಸಂಡೂರು, ೧ ಜರಿಮಲೆ, ೧ ಗುಡೇಕೋಟೆ, ೧ ಬಾಣರಾವಿ, ೧ ವುಜನಿ, ನಂತರ ಭೂಮಿರಾಜ ಇವುಗಳನ್ನು ತನ್ನ ಏಳು ಮಕ್ಕಳಲ್ಲಿ ಹಂಚಿ ಜರಿಮಲೆಯನ್ನು ಮಲ್ಲಿಕಾರ್ಜುನ ನಾಯಕನಿಗೆ ಬಿಟ್ಟುಕೊಡುತ್ತಾನೆ ಎಂಬ ವಿವರವಿದೆ. ಭೂಮಿರಾಜನು ವಿಜಯನಗರದ ಕೃಷ್ಣದೇವರಾಯನಿಗೆ ಭಿನ್ನಹ ಮಾಡಿಕೊಳ್ಳುವಾಗ ನಮಗೆ ಹಿಂದೆ ನಾಡದಳವಾರಿಕೆ ಇತ್ತು ಎನ್ನುವುದನ್ನು ನೆನಪಿಸಿದ್ದಾನೆ. ಆದುದರಿಂದ ಭೂಮಿರಾಜನಿಗಿಂತ ಮೊದಲೇ ಈ ಸಂಸ್ಥಾನ ಸ್ಥಾಪಿತವಾಗಿತ್ತು ಎಂಬ ಅಂಶ ಸ್ಪಷ್ಟವಾಗುತ್ತದೆ. ಆದರೆ ಭೂಮಿರಾಜನಿಗಿಂತ ಮೊದಲು ಇದ್ದವರು ಯಾರು ಎನ್ನುವ ಪ್ರಶ್ನೆ ಏಳುತ್ತದೆ. ಅದಕ್ಕೆ ಮೆಕೆಂಜಿ ಸಂಗ್ರಹದ ವಂಶಾವಳಿಯ ಮೂಲಕ ಸ್ಪಷ್ಟಪಡಿಸಬಹುದು. ಜರಿಮಲೆ ಪಾಳೆಯಗಾರರು ಆರಿಷಿಯಿಂದ ಬಂದವರು ಹಾಗೂ ಕಂಚಿ ದೇಶದಲ್ಲಿ ಹುಟ್ಟಿ ಅಲ್ಲೆ ಕಾಲ ಕಳೆಯುತ್ತಿದ್ದರು. ಆ ದೇಶವನ್ನು ಆಳುವ ಮುಸಲ್ಮಾನ ಮಿಯ್ಯಾಯಂಬುವರು ರಾಜ್ಯವನ್ನು ಆಳುತ್ತಿದ್ದರು. ಕದ್ರಿ ಮೂಲ ಪುರುಷರಾದ ಬೂದಿಶಿದ್ದರಾಜುಯೆಂಬುವರು ಕದ್ರಿ ಕಂಚಿ ಪ್ರದೇಶದಲ್ಲಿ ಕಾಲವನ್ನು ಕಳೆಯುತ್ತಾ ಇದ್ದರು. ಅವರ ವೃತ ಎಂಥದ್ದು ಎಂದರೆ ಜಂಗಮ ಇಲ್ಲದೆ ಶಿವಪೂಜೆ ಇಲ್ಲದೆ ಊಟ ಮಾಡುತ್ತಿರಲಿಲ್ಲ. ಅಷ್ಟು ರೀತಿಯಲ್ಲಿ ಭಕ್ತಿಯಿಂದ ಇರುತ್ತಿದ್ದರು.

ಶಿವ ಧ್ಯಾನ ಮತ್ತು ಶಿವಸ್ಮರಣೆಯಿಂದ ಇರುವುದು ಮತ್ತು ಕದ್ರಿ ಮೂಲ ಪುರುಷರಾದ ಬೂದಿಶಿದ್ದರಾಜರ ಭಕ್ತಿ ಭಾವವನ್ನು ಕಂಡು ಮಾಯಾದ ಸ್ವಾಮಿಗಳು ಬಂದು ಪ್ರತ್ಯಕ್ಷವಾಗಿ ಕಂಡು ಮಾತನಾಡಿದ್ದಾರೆ ಎಂದರೆ ನೀನು ಇಲ್ಲಿ ಇರಬೇಡ ನಿನ್ನ ಕಂಪಳವನ್ನು ತೆಗೆದುಕೊಂಡು ಮುಂದೆ ನಿನಗೆ ನಾನು ತೋರಿಸಿದಲ್ಲಿ ಬಂದು ಹಟ್ಟಿಯನ್ನು ಹಾಕು ಎಂದು ಮಾಯಾದ ಗುರುಗಳು ಹೇಳಿದರು. ಮೂಲ ಪುರುಷ ಬೂದಿಶಿದ್ದರಾಜರು ಈತನ ಹೆಂಡತಿ ಲಿಂಗಮ್ಮ

ನಾಗತಿಯವರು ಇವರಿಗೆ ೭ ಮಂದಿ ಮಕ್ಕಳು ತಮ್ಮ ಮನೆಯ ದೇವರು ಕಂಚಿ ಓಬಳದೇವರು, ಬೊಮ್ಮ ದೇವರು, ಗಾದಿಲಿಂಗ ಈ ದೇವರುಗಳ ಪೆಟ್ಟಿಗೆಗಳು ಪೂಜಾರಿಗಳ ಮೇಲೆ ಹೊರಿಸಿಕೊಂಡು ೨೧ ದಿನಕ್ಕೆ ಕಂಚಿ ದೇಶದಿಂದ ಮಳೆ ಭೂಮಿ ಸಮುದ್ರಕ್ಕೆ ಬಂದರು. ಮಾಯಾದ ಗುರುಗಳು ಆದ ಚನ್ನಬಸವ ಸ್ವಾಮಿಗಳ ಅಪ್ಪಣೆ ಪ್ರಕಾರ ಮಳೆ ಭೂಮಿ ಸಮುದ್ರದಲ್ಲಿ ಹಟ್ಟಿಯನ್ನು ಹಾಕಿಕೊಂಡು ದಿನ ಕಳೆಯುತ್ತಾ ಇದ್ದರು. ಮೂಲಪುರುಷರಾದಂಥ ಬೂದಿಶಿದ್ದರು ಈತನ ಮಕ್ಕಳು ೭ ಮಂದಿ ಹೊತ್ತು ಕಳೆಯುವ ನಿಮಿತ್ಯವಾಗಿ ಅರಣ್ಯದೊಳು ಶಿಕಾರಿ ಉದ್ದೇಶವಾಗಿ ಕೆಲವು ಮಂದಿ ಕೊಪ್ಪಲ ಗ್ರಾಮದಲ್ಲಿ ತಮಗೆ ಬೇಕಾದ ಆಯುಧ ಸಮೇತರಾಗಿ ಅರಣ್ಯದಲ್ಲಿ ಬೇಟೆಯಾಡುತ್ತಾ ಬಂದರು. ಅಲ್ಲಿ ಗುಡ್ಡ ಗುಹಾರ ಗವಿಗಳೂ, ಸರೋವರಗಳೂ, ಗಿಡ ವೃಕ್ಷಗಳು ಬಹಳ ಅದ್ಭುತವಾಗಿ ಇರುವುದು ಇವರ ಕಣ್ಣಿಗೆ ಕಾಣಿಸುತ್ತಿತ್ತು. ಮೂಲ ಪುರುಷರಾದ ಬೂದಿಶಿದ್ದರಾಜು ತನ್ನ ಮಕ್ಕಳಿಗೆ ಕಾಲಕಾಲಕ್ಕೆ ಏನೆಂದು ಹೇಳುತ್ತಾರೆ ಎಂದು ಈ ಮಾಯಾದ ಸ್ವಾಮಿಗಳನ್ನು ಅರಿಕೆ ಮಾಡಿಕೊಂಡರು. ಮಕ್ಕಳು ಇಲ್ಲಿ ಮಹಾಶಂಕರವಾದ ಸ್ಥಳ ಬಹು ಎಚ್ಚರಿಕೆಯ ಮೇಲೆ ಆಡಿರಿ ಎಂದು ಮಾಯಾದ ಸ್ವಾಮಿಗಳು ಹೇಳಿದ್ದರು. ಅಷ್ಟರೊಳಗೆ ಅಲ್ಲಿ ಅದ್ಭುತವಾದ ಕೊಳಲು ಜನ ಇರುವ ಸ್ಥಳ. ದೊಡ್ಡ ಗವಿ ಅದರ ಒಳಗಿಂದ ಶಬ್ದಕ್ಕೆ ಹೊರಗಡೆ ಬಂದು ನಾಯಿಗಳನ್ನು ಈ ೭ ಮಂದಿ ದೊರೆ ಮಕ್ಕಳನ್ನು ಬಹಳ ಭಯಂಕರವಾಗಿ ಜಗಳ ಮಾಡಿ ಪ್ರಾಣವನ್ನು ಬಿಟ್ಟಿತು ಇವರು ಮಾತನಾಡಿದ್ದು ಈ ಭಾಗ್ಯ ಬಹಳ ಗಂಡುಭೂಮಿಯಾಗಿ ಕಾಣಿಸುತ್ತದೆ.

ಒಳ್ಳೆಯದು ಮುಂದಕ್ಕೆ ಸಾಗಿರಿ ಎಂದು ಮಾಯಾದ ಸ್ವಾಮಿಗಳು ಹೇಳಿದರು. ಮತ್ತು ಒಂದು ಗುಡ್ಡಕ್ಕೆ ಹೋದರು ಅಲ್ಲಿ ಸರೋವರಗಳು ಮೇಲು ಎತ್ತರದ ಮೇಲೆ ತಂಗಾಳಿಗೆ ಒಂದು ಮೊಲ ಮಲಗಿತ್ತು. ಈ ಏಳು ಜನರು ಕಣ್ಣು ತುಂಬಾ ನೋಡೋದರೊಳಗೆ ಮೊಲವು ಎದ್ದು ಬಂದು ಬಹಳ ಜಗಳ ಮಾಡೋದರೊಳಗೆ ಮೂಲ ಪುರುಷರ ಚಿಕ್ಕ ಮಗನಾದ ಭೂಮರಾಜರೂ ತಮ್ಮ ಬಿಲ್ಲಿನಿಂದ ಒಡೆದುಬಿಟ್ಟರು. ಅಲ್ಲಿ ಇದ್ದವರು ಇದು ಏನು ಆಶ್ಚರ್ಯ ಈ ಸ್ಥಳ ಬಹಳ ಕಲಿಯ ಜಾಗವಾಗಿದೆ ಎಂದರು. ಮೂಲಪುರುಷರಾದ ಬೂದಿಶಿದ್ದರಾಜು ಈತನ ಮಕ್ಕಳು, ಬೊಮ್ಮಂತರಾಜು, ಇಮ್ಮಡಿರಾಜ, ಮುಮ್ಮಡಿರಾಜು, ಮಲ್ಲಿಕಾರ್ಜುನನಾಯ್ಕ, ಲಿಂಗಳನಾಯಕ, ಕಕ್ಕುಲ ಪೆನ್ನಪ್ಪ ನಾಯಕ, ಕಲಿಪುರುಷ ಭೂಮಿರಾಜು ಇವರೆಲ್ಲರು ಆಲೋಚನೆ ಮಾಡಿಕೊಂಡು ಶ್ರೀ ಮಾಯಾದ ಸ್ವಾಮಿಗಳಾದ ಮಳೆ ಬಗೆ ಚನ್ನಬಸಪ್ಪ ಸ್ವಾಮಿಯವರನ್ನು ಮೂರು ಅಪ್ಪಣೆ ಕೇಳಿಕೊಂಡರು. ಈ ಸ್ಥಳ ನಮಗೆ ಸ್ಥಿರಪಡಿಸಿಕೊಡಬೇಕು ಎಂದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೈಮುಗಿದು ಅಪ್ಪಣೆ ಕೊಡಬೇಕೆಂದು ಕೇಳಿಕೊಂಡರು ಒಳ್ಳೆಯದು ಮಕ್ಕಳಿರಾ ನೀವು ನೆನದಲ್ಲಿ ನಾನೂ ಮನನಿಷ್ಟ ಪ್ರಕಾರ ನಡೆಯುತ್ತೇನೆ ಎಂದು ಅಭಯ ಹಸ್ತಮಂ ಕೊಟ್ಟು ತನ್ನ ಕೈಯಲ್ಲಿ ಇದ್ದ ಬೆತ್ತವಂ ತೆಗೆದುಕೊಂಡು ಸುತ್ತ ಮಂಡಲಂವಂ ಬರದೂ ನಿರ್ಣಯವಂ ಮಾಡಿಸು ಎಂದು ಅಪ್ಪಣೆಯಾಯಿತು. ಮಾಯದಸ್ವಾಮಿಗಳು ತಂದೆ

ಮಕ್ಕಳು ಕಾಲ ಬಲ ಹೊತ್ತು ಮಳೆ ಭೂಪ ಸಮುದ್ರಕ್ಕೆ ಬಂದು ತಮ್ಮ ಹಟ್ಟಿಯನ್ನು ಹಾಕಿದ ಸ್ಥಳಕ್ಕೆ ಬಂದು ತಾವು ಲಡಾಯಿ ಮಾಡಿದ ಮೊಲ ಅದರ ಹೊಟ್ಟೆಯಂ ಬಗಿದೂ ನೋಡಲಾಗಿ ಹೊಟ್ಟೆಯ ಒಳಗೆ ಹಸಿಕಡಲೇಕಾಳು ಇದ್ದವು. ಇದು ಆಹಾರಕ್ಕೆ ಹೋಗಿತ್ತು ಈ ಕಡಲೆ ಕಾಳು ಯಾವ ಸ್ಥಳದಲ್ಲಿ ಮೇಯುತ್ತದೊ ನೋಡಿ ಬರ್ರಿಯಂದು ಪರಿಚಾರಕರನ್ನು ಕಳುಹಿಸಿ ನೋಡಲಾಗಿ ಮೂಡಲು ನಿಂತು ನೋಡಿದರೂ ಇಲ್ಲ ಉತ್ತರಕ್ಕೆ ನೋಡಿದರು ಇಲ್ಲ. ದಕ್ಷಿಣಕ್ಕೆ ನೋಡಿದರು ಇಲ್ಲ ಪಡುವಲ ನೋಡಿದರೆ ಕೊಟ್ಟೂರು ತೆರಿವಳಗೆ ಲಿಂಗಶೆಟ್ಟಿಯಂಬಾತನೂ ಸ್ವಲ್ಪ ಕಟ್ಟಿಗೆ ಹಾಕಿಸಿ ಈ ಕಟ್ಟವಳಗೆ ಸ್ವಲ್ಪ ಹಾಕಿದರು. ಆ ಕಡಲೆಯನ್ನು ಈ ಮೊದಲವು ತಿಂದು ಜರಿಮಲೆಯ ಮೇಲುದುರ್ಗದ ಮೇಲೆ ಮಲಗಿ ಇತ್ತು. ಅದನ್ನು ಊಟಕ್ಕೆ ತಯಾರಿಸಿ ಎಲ್ಲರೂ ಊಟ ಮಾಡಿದರು. ಮಾಯದ ಸ್ವಾಮಿ ಅಪ್ಪಣೆ ಕೊಟ್ಟು ತಮ್ಮ ಸ್ಥಳಕ್ಕೆ ದಯಮಾಡಿದರು ಮಾಯದ ಮಾತು ಅದೇ ಪ್ರಾಂತ್ಯದಲ್ಲು ಲೇಖಣಿ ಕೇರಿ ಎಂಬ ಗ್ರಾಮದಲ್ಲಿ ಒಂದು ವರಹಾ ಎಂದರೆ ಕಾಡು ಹಂದಿ ಆ ಗ್ರಾಮದ ಹತ್ತಿರ ಸರೋವರದಲ್ಲಿ ಸೇರಿಕೊಂಡು ಬೇಟೆಗೆ ಹೋದವರನ್ನು ಕಾಲುಗಳನ್ನು ಆದಿ ಬಟ್ಟೆಯವರನ್ನು ಅನೇಕ ಜನರನ್ನು ಬಡಿದು ಬಹಳ ಗಾಭರಿ ಮಾಡಿ ಆ ಸರಹದ್ದು ಆಳುವವರು ತಮ್ಮ ತಮ್ಮ ಕೆಲಸಕ್ಕೆ ಹೋಗುವುದಕ್ಕೆ ಭಯಸ್ತರಾಗಿ ಮನೆಗಳನ್ನು ಸೇರಿಕೊಂಡಿದ್ದರು. ಇದರ ಪೈಕಿ ಬೇಟೆಗಾರ ಭೈಯಪ್ಪ ಎಂಬುವನು ಕಂಚಿ ದೇಶದಿಂದ ದೋರಿ ಮಕ್ಕಳು ಏಳು ಮಂದಿ ಬಂದು ಭೂ ಸಮುದ್ರ ಹತ್ತಿರ ಹಟ್ಟಿಯನ್ನು ಹಾಕಿಕೊಂಡು ಇರುತ್ತಾರಂತೆ ಅವರು ಮಹಾ ಸಮರ್ಥರಂತೆ, ಮಹಾ ಬಲ್ಲಿದರು ಎಂದು ಹೇಳುತ್ತಾರೆ. ಅವರನ್ನು ಕರೆದುಕೊಂಡು ಬರಬೇಕೆ ಎಂದು ಎಲ್ಲಾ ಜನರನ್ನು ತರಿಸಿ ಯಜಮಾನನಾದ ಭೈಯಪ್ಪನು ಈ ಧೋರಿ ಮಕ್ಕಳಿಗೆ ಭಿನ್ನಹ ಮಾಡಿ ಕೇಳಿದರು. ಅವರು ಅಂದು ನಮ್ಮ ತಂದಿ ವಿಚಾರ ಮಾಡಿರಿ ಎಂದು ಹೇಳಿದರು, ಅವರು ಬಂದು ಮುಜೂರಿ ಸಲಾಮು ಮಾಡಿ ಕೇಳೋದರೊಳಗೆ ಭೂಸಿದ್ದರಾಜಗೆ ಸಾಷ್ಟಾಂಗ ನಮಸ್ಕಾರ ಮಾಡಿ ಇವರೊಬ್ಬರಿಂದ ವರ್ತಮಾನವನ್ನು ಹೇಳೋದರೊಳಗೆ ಮನೆಗೆ ನಿಮ್ಮ ಕಾರ್ಯ ಜಯವಾಯಿತು. ಈಗಲೇ ಹೇಳಿರಿ ತಡಮಾಡಬಾರದು ಎಂದು ಕಾರಣ ನೀವೇ ಹೋಗಿ ಬನ್ನಿರಿ ಏನು ಸಂಶಯ ಇಲ್ಲ. ಎಂದು ಅಪ್ಪಣೆ ಆಯಿತು. ಗುರುಗಳು ಅಪ್ಪರೊಳಗೆ ಕೆಲವು ಧೋರಿ ಮಕ್ಕಳ ಕೆಲವು ಮಂದಿ ತಮ್ಮ ತಮ್ಮ ಆಯುಧಗಳನ್ನು ತೆಗೆದುಕೊಂಡು ಸರ್ವರು ಲೇಖಣಿ ಕೆರೆ ಎಂಬ ಊರು ಹತ್ತಿರ ಇರೋ ಕೋಣನದಿನ್ನೆ ಹಳ್ಳಿಯ ಕಡೆಗೆ ಆ ಏಳು ಜನ ಧೋರಿಮಕ್ಕಳು ಹಳ್ಳ, ಕೊಳ್ಳ, ಸರೋವರಗಳಲ್ಲಿ, ಪೊದೆಗಳಲ್ಲಿ, ಕಾಡು ಹಂದಿಯನ್ನು ಬೇಟೆಯಾಡಲು ಬಾಣ ಬತ್ತಳಿಕೆಯನ್ನು ತೆಗೆದುಕೊಂಡು ಹಾಗೂ ನಾಯಿಗಳನ್ನು ಕರೆದುಕೊಂಡು ಹೋದರು. ಹಂದಿಯನ್ನು ಗುಂಡಿಕ್ಕಿ ಹೊಡೆಯಲು ಪ್ರಯತ್ನಿಸಿದರು. ಆದರೂ ಆ ಕಾಡುಹಂದಿಯು ತಪ್ಪಿಸಿಕೊಂಡು ಹೋಯಿತು. ಆದರೆ ಒಂದಕ್ಕೆ ಇಡಬಾರದು ಎಂದು ಹಂದಿಯನ್ನು ಬೇಟೆಯಾಡಲು ಮುನ್ನುಗ್ಗಿದರು. ಈ ಮಾತಿಗೆ ರೋಷ ಹುಟ್ಟಿ ಕಾಡುಹಂದಿಯ ಬೆನ್ನು ಹತ್ತಿದರು. ಎರಡುವರೆ ದಿನ ಆಯಿತು

ಹಂದಿಯನ್ನು ಬೇಟೆಯಾಡಲು ಆಗಲಿಲ್ಲ. ಅಲ್ಲಿಂದ ಉಜ್ಜಯಿನಿ ಎಂಬ ಗ್ರಾಮವು ರೂಪವಾಗಿಯಿತ್ತು. ಅಲ್ಲೆ ಶೀಗೆಪೊದೆ ಒಳಕ್ಕೆ ಹಂದಿಯು ಸೇರಿಕೊಂಡು ಮಾಯವಾಯಿತು. ಅಲ್ಲಿಗೆ ಈ ಅಣ್ಣ ತಮ್ಮಂದಿರು ನೀರು ಇಲ್ಲದೆ ಊಟ ಮಾಡಲು ಅನ್ನವಿಲ್ಲದೆ ಬಳಲಿ ಬಾಯಾರಿ ತ್ರಾಣವಿಲ್ಲದೆ ಬಹಳ ಪ್ರಾಯಾಸಪಟ್ಟರು. ಅದರ ಪೈಕಿ ಒಂದು ಗ್ರಾಮ ಸಿಂಹವು ಆ ಪೊದೆಯೊಳಗೆ ಹೋಗಿ ಕರು ಮುಣಿಗಿ ಮತ್ತು ಬಂತು ಈ ಧೋರೆ ಮಕ್ಕಳಾಯದುರಿಗೆ ನಿಲ್ಲಲು ಅವರು ಕಂಡು ಈ ರಾಷ್ಟ್ರವನ್ನು ನೋಡಿದರು ಕರುಕಾಣಲಿಲ್ಲ ಇಲ್ಲೇ ಗ್ರಾಮ ಸಿಂಹವೂ ಮೈ ತೊಳೆಕೊಂಡು ಬಂತು ಎಂದು ನೋಡೋಣ ಎಂದು ಆ ಏಳು ಮಂದಿ ಧೋರಿ ಮಕ್ಕಳು ಒಬ್ಬರಿಗೊಬ್ಬರು ಆಶ್ಚರ್ಯಮಾಡಿಕೊಂಡು ಹೋಗೋದರೊಳಗೆ ಅಲ್ಲಿ ಒಂದು ವರ್ತಿಯೂ ಇವರ ಕಣ್ಣಿಗೆ ಕಾಣಿಸಿತು.

ಹಿರಿಯ ಮಗನಾದ ಮುಮ್ಮಡಿ ಅರಸು ನೋಡೋದರೊಳಗೆ ಸಾಕ್ಷಾತ್ ಪರಮೇಶ್ವರನು ತೂಗು ಮಂಚದ ಮೇಲೆ ಕುಳಿತುಕೊಂಡಿರುವ ಗುರುಗಳನ್ನು ನೋಡಿ ಮುಮ್ಮಡಿ ಅರಸ ತಮ್ಮಂದಿರುಗಳು ನೋಡೋದರೊಳಗೆ ಯತಾ ಪ್ರಕಾರ ತಾವು ಯಾರು ಯಂದು ಕೇಳಿದಲ್ಲಿ ನಿಮ್ಮ ಮುಂದೆ ಹೇಳುವುದು ಇಲ್ಲ ನಿಮ್ಮ ಬೆನ್ನಲ್ಲಿ ಬಂದಂಥ ತಮ್ಮನನ್ನು ಇಲ್ಲಿಗೆ ಕಳುಹಿಸಿದರೆ ನಾನು ಹೇಳುತ್ತೇನೆ ಎಂದರು ಇದರಿಂದ ಅಣ್ಣ ತಮ್ಮಂದಿರು ಮಾತನಾಡಿ ಚಿಕ್ಕ ತಮ್ಮನಾದ ಭೂಮರಾಜನನ್ನು ಕಳುಹಿಸಿದರು. ನಾನು ಹೋಗಿ ನೋಡಿ ಬರುತ್ತೇನೆ ಎಂದು ಅಣ್ಣನವರಿಗೆ ನಮಸ್ಕಾರ ಮಾಡಿ ತನ್ನ ಗುರುಗಳ ಧ್ಯಾನವನ್ನು ಮಾಡಿ ವರ್ತಿಯ ವಳಕ್ಕೆ ಇಳಿದು ಎರಡು ಕೈಯಗಳನ್ನು ಜೋಡಿಸಿಕೊಂಡು ಎದುರಿಗೆ ನಿಂತನು. ಅಪ್ಪ ಮಗನೆ ನಿನಗೆ ರಾಜ್ಯ ಪಟ್ಟವಾಗಲಿ, ದೇಶ ಸಾಧನವಾಗಲಿ ನೀನು ನೆನದೆ ಕೊಡಲೆ ಪ್ರತ್ಯಕ್ಷವಾಗುತ್ತೇವೆ ಎಂದು ತಮ್ಮ ಹಸ್ತದಲ್ಲಿದ್ದ ಚತುಷ್ಕದ ಬೀಜವನ್ನು ನಿನ್ನ ಕೊರಳಲ್ಲಿ ಧರಿಸಿಕೋ ಎಂದು ಎರಡು ಕೈಯೊಳಗೆ ಇಟ್ಟರು. ನೀನು ಈ ಸ್ಥಳದಲ್ಲಿ ನನ್ನ ಮಠ ಅನ್ನುವುದು ಭೂಗತವಾಗಿ ಇರುತ್ತದೆ. ಕಾಮಟಗರನ್ನು ಕರೆಸಿ ಹೊತ್ತು ತಯಾರು ಮಾಡಿಸಿ ನಿನ್ನ ಹಿಂದೆ ಬಂದ ಮಾಯಾದ ಸ್ವಾಮಿಯವರ ಮಂಟಪ ಮಹಾತ್ಮೆಯನ್ನು ನಿರ್ಮಾಣ ಮಾಡು ಎಂದರು. ಈ ಭೂಲೋಕ ಏಕ ಚಕ್ರವರ್ತಿಯಾಗಿ ಸಾಧನ ಮಾಡಿ ಸಿಂಹಾಸನವನ್ನು ಪ್ರತಿಷ್ಠೆ ಮಾಡುವುದು, ದೇಶ ಮಧ್ಯ ಇರುವಂಥ ಪೆಟಶೆಟ್ಟಿ, ಪಟ್ಟಶೆಟ್ಟಿ ದೊಡ್ಡ ದೊಡ್ಡ ಪೇಟೆಯವರನ್ನು ರಕೆಸಿ ನೀನು ನಿರ್ಮಾಣ ಮಾಡಿದ್ದು ದೇಶಕ್ಕೆ ಜಗದ್ಗುರುವು ಮಾಡಿಸು, ಮೂರು ದೇಶದ ಸಮುಸ್ಥಾನಿಕರು ಮೂವತ್ತು ಸಾವಿರ ಪೇಟೆಸ್ತರು ಕಲಿತು ಈ ಸಿಂಹಾಸನವನ್ನು ನಿರ್ಮಾಣ ಮಾಡಿ ಪಾದ ಕಾಣಿಕೆ ಇಟ್ಟು ಈ ದೇವಸ್ಥಾನ ಮರುಳಾರ್ಯನ ಭಾರ ತಮ್ಮದೇ ಇರುತ್ತದೆ ಎಂದು ಹೇಳಿ ಹೊರಟು ಹೋಗುತ್ತಾರೆ. ಈಕಡೆ ಭೂ ರಾಜರು ದೇಶ ಸಾಧನೆ ಮಾಡಿಕೊಂಡು ಬಂದು ಕಲಿಗದ್ದಿಯ ಹೊತ್ತು ಮರಿಯಾದಿ ಜನಗಳಿಗೆ ಮರಿಯಾದಿ ನಡೆಸಿ ಮಹಾಸ್ವಾಮಿಯು ಇದ್ದರು ಆರು ಮಂದಿ ಅಣ್ಣ ತಮ್ಮಂದಿರು ಹೋಗಿ ತಮ್ಮ ತಂದೆಯ ಮುಂದೆ ಈ ವೃತ್ತಾಂತವನ್ನು ಹೇಳಿ ಭೂಮಸಮುದ್ರವನ್ನು ಬಿಟ್ಟು

ಭೇಟಿ ಮಾಡಿದ ಜಾಗಕ್ಕೆ ಬಂದು ಮಾಯದ ಗುರುಗಳ ಚಿತ್ತದಿಂದ ಮಂಡಲವಂ ಬರೆದು ಬುಡ್ಡೆಕಲ್ಲು ನಿರ್ಮಾಣ ಮಾಡಿ ಚಿತ್ರಬಾನು ಸಂಕಾರ್ತಿಕಾ ಶುದ್ಧ ಬುಧವಾರ ಜರಿಮಲೆಯಂದು ಭಟ್ಟಂಗಿಯವನ ಕೂಡ ೩ ಸಾರಿ ಕೂಗಿಸಿ ಮುಂದೆ ಕೋಟೆ ಕೊತ್ತಳ ಭಾವಿ ತೆರೆ ಗ್ರಾಮ ಭಕ್ತಿಗೆ ೪೮ ಲಕ್ಷ ವರಹಗಳನ್ನು ತರಿಸಿ ಪಟ್ಟಣ ತಯಾರು ಮಾಡಿಸಿ ೧೦ ವರ್ಷಕ್ಕೆ ಹುಲ್ಲು ರೈತರಿಗೆ ಕೊಡಿಸಿ ರಾಜ್ಯವನ್ನು ಸಾಧನೆ ಮಾಡಿದ್ದು, ಗುಡಿಕೋಟೆ, ಸಂಡೂರು, ವಡ್ಡು, ದರೋಜಿ, ಬಾಂಡ್ರಾವಿ, ತುಡುತುಸಿ, ತೋಳಗಲ್ಲು, ಬಳ್ಳಾರಿ ಪರಿಯಾಗತಿ ಸಾಧನೆ ಮಾಡಿದರೂ, ಮಲುಖಾರ್ಜುನ ನಾಯ್ಕ ೫೦೦ ಕಾಲಬಲದೊಡನೆ ೩೦೦ ಕುದುರೆ, ೫ ಆನೆ, ೯ ಒಂಟೆ ಇಷ್ಟು ದಂಡು ತೆಗೆದುಕೊಂಡು ಹೋಗಿ ಯುದ್ಧ ಮಾಡಿ ಸುರಪುರದ ಹೆಣ್ಣುಮಗಳು ತಲೆ ಕೊಯಿದುಬಿಟ್ಟು ಹೆಣ್ಣು ಮಗಳು ಸಂಪಾದಿಸಿದ ಭಕ್ಷ ಭಂಡಾರವನ್ನು ತೆಗೆದುಕೊಂಡು ಬಂದು ಜರಿಮಲೆಗೆ ಸೇರುವುದರೊಳಗೆ ಆ ರುಂಡ ಬಂದು ಮನೆಯ ಒಳಗೆ ಕುಳಿತುಕೊಂಡಿತು. ನಾನು ನಿಮ್ಮ ಮನೆ ದೇವತೆ ಆಗಿ ಇರುತ್ತೇನೆ. ನಾನು ದಂಡಿನ ಒಳಗೆ ಇರುತ್ತೇನೆ.

ನನ್ನ ನಾಮಕರಣ ದುರ್ಗಾದೇವತೆ ಎಂದು ಪೂಜಿಸು, ನಿನ್ನ ಕಾರ್ಯಕ್ಕೆ ಅಪಜಯವಿಲ್ಲ ಎಂದು ನುಡಿದಳು. ಈ ಕಡೆ ಬೂಮರಾಜರು ತನ್ನ ಮನೆ ಗುರುವು ಆದ ಮರುಳುಶಿದ್ದನ ಸೇವಾ ಮಂಟಪಗಳು, ದೇವಸ್ಥಾನಗಳು, ಬಾವಿಗಳು, ಬೀದಿ ಬಜಾರುಗಳು, ಗುಡಿಸುತ್ತ ಆವರಣಂಗಳು, ಮಹಾಧ್ವಾರ ಗೋಪುರಗಳು, ಕಾಮಟಗರ ಕಡೆಯಿಂದ ಕಟ್ಟಿಸಿದರು. ಮಹಾಸ್ವಾಮಿಯು ಪೂಜೆಯಂ ಮಾಡುವುದಕ್ಕೆ ಪಟ್ಟದ ಕಾಶಿಯ ಪೂಜಾರಿಯಂ ನೇಮಿಸಿದರು, ಉಗ್ರಾಣಿಕರು ಎಂದು ಭಾಧ್ಯನ್ಯ ಮಾಡಿ ಇಟ್ಟರು ಗುಡಿನಾಯ್ಕ ಎಂದು ಈತಗೆ ಮಾಡಿ ಮಾನ್ಯವೊ ಹಿನಾಮು ನಾಯ್ಕನಿಗೆ ಕೊಟ್ಟರು. ಈ ಗುಡಿಗೆ ನೀವು ಮೂವರು ಕರ್ತರು ಮಾಲು ಯಾ ಹೊತ್ತು ನಿಧಿ ನಿಕ್ಷೇಪಣೆ ಏನು ಬಂದರು ಖರ್ಚು ವಗೈರೆ ನಿಮ್ಮದೆ ಇರುತ್ತದೆ. ಯಾವತ್ತು ಖರ್ಚು ಸಾದನ ಮಾಡಿದಲ್ಲದೆ ಉಳಿದ ಮಾಲು ನಿಮ್ಮ ಭಾಗಕ್ಕೆ ತೆಗೆದುಕೊಳ್ಳಬಹುದು ಮೇಲಾಗಿ ಮಹಾಸಂಸ್ಥಾನದಿಂದ ರಥೋತ್ಸವ ಮಹೋತ್ಸವಗಳಿಗೆ ಮರುಳಾರ್‍ಯನ ಶೇವಕ್ಕೆ ವರ್ಷ ಒಂದಕ್ಕೆ ೫೦ ವರಹ ಸಂಸ್ಥಾನದಿಂದ ಒಪ್ಪಿಸತಕ್ಕದ್ದು.

ವಿಕ್ರಮನಾಮ ಕಾರ್ತಿಕ ಶುದ್ಧ ೧೦ ಗುರುವಾರ ಮುಹೂರ್ತದಶನಾಮ ವರ್ತಿಯಲ್ಲು, ವುಜೀನಿಯಯಂಬ ನಾಮ ಮಾಡಿ ಹನ್ನೆರಡು ಮಂದಿ ಆಯಾಗಾರರನ್ನು ನಿರ್ಣಯವಂ ಮಾಡಿ ಉತ್ತರ ದಿಕ್ಕಿನಲ್ಲಿ ಬುರ್ಜ ಕಟ್ಟಿಸಿ ಆ ಸ್ಥಳದಲ್ಲಿ ವುಗ್ಗಿ ಮನೆಯಂದು ಹೆಸರು ಕರೆದು ವುಗ್ಗಿ ಶಾಸ್ತ್ರವಂ ಮಾಡಿ ಶಾಸ್ತ್ರೀಕರಿಂದ ಬುಡ್ಡೇಕಲ್ಲು ಪೂಜರಿಂದ ನಿರ್ನಾಯವಂ ಮಾಡಿ ಮಾಯದ ಸ್ವಾಮಿಯಾದ ಕಂಚಿ ದೇಶದಿಂದ ತಂದ ಮಳೆಬಗೆ ಚನ್ನಬಸವಸ್ವಾಮಿಗಳನ್ನು ಪಟ್ಟಾಭಿಷೇಕ ಮಾಡುವುದಕ್ಕೆ ಹರಪನಹಳ್ಳಿ ಸಮುಸ್ಥಾನದವರು ಚಿತ್ರದುರ್ಗದ ಸಮುಸ್ಥಾನದವರೋ ಜರಿಮಲಿ ಇವರುಗಳು ಬಂದು ದೇಶ ಮಧ್ಯ ವರ್ತಕರು ಸಾಹುಕಾರನು ಪೇಟಶೆಟ್ಟಿ ಪಟ್ಟಣಶೆಟ್ಟಿಯುವರು ಇನ್ನು ಮುಂತಾದವರು ಕಲಿತು ಈ ಸಿಂಹಾಸನಕ್ಕೆ ಅಧಿಪತಿಯನ್ನು ಮಾಡಿ

ಮತ ಮಹತ್ತು ತಯಾರು ಮಾಡ್ಸಿ ಆ ಸಿಂಹಾಸನದ ಗದ್ದಿಗೆ ಮೇಲೆ ಕೊಡಿಸಿ ಪಾದ ಗಾಣಿಕೆಯನ್ನು ಇಟ್ಟು ಈ ಮಠಕ್ಕೆ ಕಾರ್ಯಕರ್ತರಾಗಿ ಇರುವುದು ಒಂದು ಸರ್ವ ಜನರನ್ನು ಒಪ್ಪಿಸಿದರು. ಈ ಕಡೆ ಶ್ರೀ ಮರುಳಸಿದ್ದೇಶ್ವರ ದೇವರಗುಡಿ ಭೂಸ್ಥಾಪನೆ ಆಯಿತು.

ಜರಿಮಲೆ ಪಾಳೆಯಗಾರರು ರಾಜ್ಯವನ್ನು ಆಡಳಿತ ಅನುಕೂಲಕ್ಕಾಗಿ ಸೀಮೆ, ಸಮ್ಮತಿ, ಗ್ರಾಮಗಳೆಂದು ವಿಂಗಡಿಸಲಾಗಿತ್ತು. ಸೀಮೆಯನ್ನು ಆಡಳಿತದ ಅಧಿಕಾರಿಗಳು ನೋಡಿಕೊಳ್ಳುತ್ತಿದ್ದರು.

### ಬಿ. ಜರಿಮಲೆ ಪಾಳೆಗಾರರ ಆರ್ಥಿಕ ವ್ಯವಸ್ಥೆ

### ನೈಸರ್ಗಿಕ ಸಂಪತ್ತು

ಪ್ರಕೃತಿದತ್ತವಾದ ಮಣ್ಣು, ನೀರು, ಖನಿಜ, ಅರಣ್ಯ ಮುಂತಾದವುಗಳನ್ನು 'ನೈಸರ್ಗಿಕ ಸಂಪನ್ಮೂಲಗಳು' ಎನ್ನುವರು. ಒಂದು ನಾಡಿನ ನೈಸರ್ಗಿಕ ಸಂಪನ್ಮೂಲಗಳು ಮತ್ತು ಅವುಗಳನ್ನು ಬಳಸಿಕೊಳ್ಳುವ, ಉಪಯೋಗಪಡಿಸಿಕೊಳ್ಳುವ ಜನರ ಪರಿಶ್ರಮದಿಂದ, ಆ ನಾಡಿನ ಆರ್ಥಿಕ ವ್ಯವಸ್ಥೆಯನ್ನು ತಿಳಿದುಕೊಳ್ಳಬಹುದು. ಜನರು ತಮ್ಮ ಜೀವನ ನಿರ್ವಹಣೆಗೆ ಮತ್ತು ಆರ್ಥಕ ಭದ್ರತೆಗೆ, ಆ ನಾಡಿನ ನಿಸರ್ಗ ಸಂಪತ್ತಾದ ಭೂಮಿಯನ್ನು ಆಶ್ರಯಿಸುವರು. ಭೂಮಿಯ ಒಳಗೆ ಸಿಗುವ ಖನಿಜಗಳು ಹವಾಗುಣದಿಂದ ಉಂಟಾಗುವ ಅರಣ್ಯಗಳು, ಮಣ್ಣು, ನೀರು ಇವುಗಳ ಬಳಕೆಯನ್ನು ಕರ್ನಾಟಕದ ಪಾಳೆಯಗಾರರ ಕಾಲದಲ್ಲಿ ಯಾವ ರೀತಿಯಲ್ಲಿ ಬಳಸಿಕೊಂಡಿದ್ದರು ಎನ್ನುವುದಕ್ಕೆ ಶಾಸನಗಳಲ್ಲಿ ನೇರವಾದ ಮಾಹಿತಿಗಳು ಸಿಗುವುದಿಲ್ಲ. ಆದರೆ ಅಲ್ಲಿಯ ಜನಜೀವನದಿಂದ ಹೇಗೆ ಬಳಸಿಕೊಳ್ಳುತ್ತಿದ್ದರು ಹಾಗೂ ಎಂತೆಂಥ ಖನಿಜಗಳು ಅರಣ್ಯಗಳಲ್ಲಿ ಮರಗಳು ಸಿಗುತ್ತಿದ್ದುವೆಂದು ತಿಳಿಯಬಹುದು.

### ಭೂಶಿಲಾ ಸಂಪತ್ತು

ಕರ್ನಾಟಕದಲ್ಲಿ ಅನೇಕ ಖನಿಜಗಳು ದೊರೆಯುತ್ತಿದ್ದವು. ಅಂಜನಕಲ್ಲು, ಕುರಂದಕಲ್ಲು, ರಂಗೋಲಿಕಲ್ಲು, ಸುಣ್ಣದಕಲ್ಲು, ಬಿಳೀಬೆಣಚುಕಲ್ಲು, ಸುವರ್ಣಮುಖಿಕಲ್ಲು, ಬಾಕ್ಸೈಟ್, ಕ್ರೋಮೈಟ್, ಕ್ಯಾನೈಟ್, ವರ್‌ಮಿಕ್ಯಲೈಟ್, ಮ್ಯಾಂಗನೀಸ್‌ಗಳು ಬಳ್ಳಾರಿ ಪ್ರಾಂತ್ಯದಲ್ಲೂ ದೊರೆಯುತ್ತಿದ್ದವು. ಶಾಸನಗಳಲ್ಲಿ ಕಲ್ಲುಕುಟಿಗ, ವಡ್ಡರು ಎಂಬ ಪದ ವಿಶೇಷವಾಗಿ ಬರುತ್ತದೆ. ಅರಮನೆಗೆ ಅಲಂಕಾರಿಕ ಕಲ್ಲುಗಳನ್ನು, ಕೋಟೆ ಕಟ್ಟಲು ಸಾದಾ ಕಲ್ಲುಗಳನ್ನು ಮನೆಗೆ ಸುಣ್ಣ ಹಚ್ಚಲು, ಗಾರೆ ತಯಾರಿಸಲು, ತಾಂಬೂಲ ಸೇವಿಸಲು ಸುಣ್ಣದ ಕಲ್ಲನ್ನು, ಮನೆಗೆ ಬಣ್ಣ ಬಚ್ಚಲು, ಗೋಣಿ ಹಾಗೂ ಸಂನ್ಯಾಸಿಗಳ ಬಟ್ಟೆಗಳಿಗೆ ಬಣ್ಣ ಹಚ್ಚಲು ಹಳದಿ ಹಾಗೂ ಕಾವಿ ಮಣ್ಣುಗಳನ್ನು, ಮನೆಯ ಗೋಡೆ ಕಟ್ಟಲು ಬಿಳಿಯ ಮಣ್ಣನ್ನು ಉಪಯೋಗಿಸುತ್ತಿದ್ದರು.

"ಪಾಳೆಗಾರರ ಕಾಲದ ಶಾಸನಗಳಲ್ಲಿ 'ಕೆಂಚುಗಾರ' ಎಂಬ ಪದವಿದೆ. ಇವರು ತಾಮ್ರ, ಹಿತ್ತಾಳೆ ಹಾಗೂ ಕಂಚಿನ ಸಾಮಾನುಗಳನ್ನು ಮಾಡುತ್ತಿದ್ದರು. ಪೋಲೋ, ಇಬ್ನಬಟೂಟ, ತವರ್ನೆರಿಯರ್ ಎಂಬ ಪ್ರವಾಸಿಗರು ಬಳ್ಳಾರಿಯಲ್ಲಿ ವಜ್ರದ ಗಣಿಗಳಿದ್ದವೆಂದು ಹೇಳಿದ್ದಾರೆ."[೨೧]

ಬಂಗಾರವು ಪಾಳೆಯಗಾರರ ಕಾಲದಲ್ಲಿ ಹೇರಳವಾಗಿ ದೊರೆಯುತ್ತಿತ್ತು. ದೇವರ ಆಭರಣಗಳನ್ನು ಮಾಡಲು ದೇವಸ್ಥಾನದಿಂದ ನೇಮಿಸಲ್ಪಟ್ಟ ಅಕ್ಕಸಾಲಿಗನೇ ಮಾಡುತ್ತಿದ್ದನು.

**ಅರಣ್ಯ ಸಂಪತ್ತು**

ಬಳ್ಳಾರಿ ಪ್ರಾಂತ್ಯದಲ್ಲಿ ಜಾಲರಿ, ದಿಂಡಿಗ, ಹೊರಗಲು, ಗಂಧ, ಬಗೂಲ್, ಆಲ, ಹುಣಿಸೆ, ಬೇವು, ಕಕ್ಕೆ, ತಂಗಡಿ, ಹೊನೆ, ತುಪ್ರಾ ಮುಂತಾದ ಮರಗಳು ಬೆಳೆಯುತ್ತಿದ್ದವು. ಮರದ ಕೆಲಸವನ್ನು ಮಾಡುವವನಿಗೆ 'ಬಡಗಿ' ಎನ್ನುವರು. ಇವರಿಗೂ ಮಾನ್ಯ ಸ್ಥಾನವಿತ್ತು. ಜರಿಮಲೆ ಪಾಳೆಯಗಾರರಲ್ಲಿ ಸಹ ಬಡಗಿತನ ಮಾಡುವವರಿಗೆ ತಮ್ಮ ಪ್ರಾಂತ್ಯದಲ್ಲಿ ಸೂಕ್ತ ಸ್ಥಾನ ದೊರಕಿಸಿಕೊಟ್ಟಿದ್ದರು. ಹಾಗೂ ಅವರಿಗೆ ಸಂಪೂರ್ಣ ಸಹಕಾರವನ್ನು ನೀಡುತ್ತಿದ್ದರು.

**ಭೂ ಸಂಪತ್ತು**

ಭೂಮಿಯನ್ನು ಕೃಷಿಗೆ ಯೋಗ್ಯವಾದ ಮತ್ತು ಬೀಳು ಭೂಮಿ ಎಂದು ವಿಭಾಗಿಸಬಹುದು. ಬೀಳು ಭೂಮಿಯೆಂದರೆ ಕೃಷಿಗೆ ಯೋಗ್ಯವಲ್ಲದ ಭೂಮಿ, ಹೊಸ ಊರುಗಳ ಸೃಷ್ಟಿಯೊಂದಿಗೆ, ಅದರ ಸುತ್ತಮುತ್ತಲು ಕೃಷಿಗೆ ಯೋಗ್ಯವಾಗುವಂತೆ ಭೂಮಿಯನ್ನು ಮಾರ್ಪಡಿಸುತ್ತಿದ್ದರು. ಬೀಳುಭೂಮಿಯನ್ನು ಪಶುಪಾಲನೆಗಾಗಿ ಹುಲ್ಲುಗಾವಲೆಂದು ಉಪಯೋಗಿಸುತ್ತಿದ್ದರು. ಊರಿಗೊಂದು ಗೋಮಾಳ ಇರುತ್ತಿತ್ತು. ಶಾಸನಗಳಲ್ಲಿ ಭೂ ದಾನವೇ ಹೆಚ್ಚಾಗಿರುವುದನ್ನು ಕಾಣಬಹುದು. ಜರಿಮಲೆ ಪಾಳೆಯಗಾರರು ವಿಜಯನಗರದ ಅರಸರ ಒಪ್ಪಿಗೆ ಪಡೆದು, ಕಾಡುಗಳನ್ನು ಕಡಿದು, ಅಲ್ಲಿ ಊರುಗಳನ್ನು ನಿರ್ಮಿಸಿರುವ ಉದಾಹರಣೆಗಳಿವೆ. ಅಲ್ಲದೆ ಕೃಷಿಗಾಗಿ ಕಾಡುಗಳನ್ನು ಕತ್ತರಿಸಿ ಸಮತಟ್ಟಾದ ಭೂಮಿಯನ್ನು ನಿರ್ಮಿಸಿದರು.

**ಭೂಮಿಯ ಗೇಣಿ ಅಥವಾ ಹಿಡುವಳಿ**

'ಉಪಕಾರಿ' ಮತ್ತು 'ಸೇವೆಗಾಗಿ' ಕೊಟ್ಟ ಭೂಮಿಯ ಹಿಡುವಳಿಗಳೆಂದು ಎರಡು ವಿಭಾಗ ಮಾಡಬಹುದು. 'ಉಪಕಾರಿ' ಹಿಡುವಳಿಯಲ್ಲಿ ಬ್ರಹ್ಮದಯಾ, ದೇವದಯಾ ಮತ್ತು ಮಠಾಪುರವೆಂಬ ಮೂರು ರೀತಿಗಳಿದ್ದವು. ಬ್ರಾಹ್ಮಣನಿಗೆ ಅಥವಾ ಬ್ರಾಹ್ಮಣ ಸಮುದಾಯಕ್ಕೆ ದಾನವಾಗಿ ಕೊಟ್ಟ ಭೂದಾನಕ್ಕೆ 'ಬ್ರಹ್ಮದಯಾ' ಎಂದೂ, ಸರ್ವಸೇವೆಗಾಗಿ ಕೊಡುವ ಭೂದಾನಕ್ಕೆ 'ದೇವದಯಾ' ಎಂದೂ ನಂದಾದೀವಿಗೆಗೆ ಗಾಣವನ್ನೇ ದಾನವಾಗಿ ಕೊಡುತ್ತಿದ್ದುದು ಉಂಟು. 'ಮಠಾಪುರ'ವೆಂದರೆ ಮಠಗಳು ಧಾರ್ಮಿಕ ಪರಂಪರೆಯನ್ನು ಕಾಪಾಡಿಕೊಂಡು ಬರುವುದಕ್ಕಾಗಿ ಕೊಡುತ್ತಿದ್ದ ಭೂದಾನ. ನಾಯಕರು ಮಾತ್ರವಲ್ಲದೆ ಇತರ ಅಧಿಕಾರಿಗಳೂ ಪ್ರಜಾ ಜನರು ದೇವಮಾನ್ಯವನ್ನು ಕೊಡುತ್ತಿದ್ದುದು ಶಾಸನಗಳಿಂದ ತಿಳಿಯುತ್ತದೆ. ಮತ್ತೊಂದು ರೀತಿಯ ಹಿಡುವಳಿ 'ಸೇವಾ ಹಿಡುವಳಿ' ಇದು ಸರ್ಕಾರಕ್ಕೆ ಸೇವೆಯನ್ನು ಸಲ್ಲಿಸಿದವರಿಗೆ, ಸೈನ್ಯವನ್ನು ಕೂಡಿಸಲು ಮತ್ತು ನೋಡಿಕೊಳ್ಳಲು ಕೊಡಲಾಗುತ್ತಿದ್ದ ಭೂದಾನ.

**ಭೂಮಿಯ ಪ್ರಕಾರಗಳು**

ಮಳೆಯನ್ನವಲಂಬಿಸಿ ಸಾಗುವಳಿ ಮಾಡುವ ಭೂಮಿಯನ್ನು 'ದೇವಮಾತೃಕೆ ಅಥವಾ ಋಷಿಮಾತೃಕೆ' ಎಂದೂ, ನದಿ-ಕೆರೆ-ಬಾವಿಗಳನ್ನು ಅವಲಂಬಿಸಿ ಇರುವುದನ್ನು ನದಿಮಾತೃಕೆ ಎಂದೂ ಎರಡು ಪ್ರಕಾರಗಳಿವೆ. ದೇವಮಾತೃಕೆಗಳನ್ನು ಕಾಡಾರಂಭ ಹೊಲ ಅಥವಾ ಬೆದ್ದಲು ಎಂದೂ ನದಿ ಮಾತೃಕೆಗಳನ್ನು ನೀರಾರಂಭ, ಗದ್ದೆ ತೋಟ ಎಂದು ಶಾಸನಗಳಲ್ಲಿ ಹೇಳಿದೆ. ಇದನ್ನು 'ಬಾಗಾಯತ' ಎಂದು ಕರೆಯುವರು. ಹೊಲದಲ್ಲಿಯೇ ನೀರು ನಿಲ್ಲುವಂತೆ ಕಟ್ಟೆಯನ್ನು ಕಟ್ಟಿ ಮಳೆಯ ನೀರನ್ನು ಸಂಗ್ರಹಿಸಿ ಭತ್ತವನ್ನು ಬೆಳೆಯಬಹುದಾದ ತಾತ್ಕಾಲಿಕ ಗದ್ದೆಗೆ 'ನೀರ್ಮಣ್ಣು' ಎನ್ನುತ್ತಿದ್ದರು. ಕಟ್ಟೆ ಒಡೆದರೆ ಬೆದ್ದಲು ಭೂಮಿಯಾಗುವುದು. ಕೆಂಪು ಮಣ್ಣು ಹಾಗೂ ಮರಳು ಮಿಶ್ರಿತವಿರುವ ಕಡೆ ತೋಟಗಾರಿಕೆ ಚೆನ್ನಾಗಿ ನಡೆಯುತ್ತದೆ. ಬುಕಾನನ್ ಹೇಳಿರುವ ಪ್ರಕಾರಗಳಲ್ಲದೆ ಕೊಳಗ ಗದ್ದೆ ಛಳಿಮರದನ ಗದ್ದೆ, ಕೆರೆ ಹಿಂದಿನ ಗದ್ದೆ, ಎರೆಗದ್ದೆ, ಜೀರಿಗೆ ಮೇಡು ಗದ್ದೆ ಎಂಬ ಪ್ರಕಾರಗಳನ್ನು ಶಾಸನಗಳಲ್ಲಿ ಕಾಣಬಹುದು.

**ಭೂಮಾಪನ (ಉದ್ದಳತೆ)**

ಭೂಮಿಯ ಅಳತೆಯ ಬಗ್ಗೆ ಶಾಸನಗಳಲ್ಲಿ ಮಾಹಿತಿ ವಿರಳವಾಗಿದೆ. ಇಪ್ಪತ್ತೆಂಟು ಗೇಣುಗಳೆ, ಪದಿನರುಗೇಣ್‌ಕೋಲ್, ಐವತ್ತೆರಡು ಗೇಣುಗಳೆ, ಹದಿನಯ್ದು ಮಾರುಂಟೆ ತೋಳುಘಳೆ, ಹದಿಮೂರು ಗೇಣ ಮುಂತಾದ ಉದಾಹರಣೆಗಳಿವೆ. ಬಂಟರ ಭಾವನ ಕೋಲ್ ಎಂಬ ಬಿರುದನ್ನು ಒಳಗೊಂಡಿರುವ ಅಳತೆ ಮಾನವು ಇದೆ. ಬೇರೆ ಬೇರೆ ಮೂಲಗಳ ಪ್ರಕಾರ '೧೮ ಉದ್ದ'ದ ದಂಡದಿಂದ ಭೂಮಿಯನ್ನು ಅಳೆಯುತ್ತಿದ್ದರೆಂಬುದು ತಿಳಿದುಬರುತ್ತದೆ. ಈ ಉದ್ದವನ್ನು 'ಮೆಟ್ಟು' ಎಂಬ ಉಪಕರಣದಿಂದ ಅಳೆಯುತ್ತಿದ್ದರು. ಶಾಸನಗಳಲ್ಲಿ ಖಂಡುಗ ಭೂಮಿ, ಕೊಳಗ ಭೂಮಿ, ಬಳ್ಳ ಭೂಮಿ ಎಂದು ಬರುವುದು ಹೊಲಗಳನ್ನು ಅಳೆಯುವಾಗ ಬೀಜಾವರಿ ಪದ್ಧತಿಯನ್ನು ಅನುಸರಿಸುತ್ತಿದ್ದರೆಂದು ಕಾಣುತ್ತದೆ. 'ಬೀಜವರಿ ಹತ್ತು ಕೊಳಗ', ಇವಲ್ಲದೆ 'ಪ್ರಾಯರೇಖೆ' ಎಂಬ ಪದವನ್ನೂ ಕಾಣಬಹುದು. "ಜರಿಮಲೆ ಪಾಳೆಯಗಾರರು ವಿಜಯನಗರದವರ 'ಬತಾಯ' ಅಥವಾ ಅಥಾವಣಿ 'ಚಾವಡಿ' ಪದ್ಧತಿಯನ್ನು ಅನುಸರಿಸಿದರು."[೨೨] ಈ ಪದ್ಧತಿಯಲ್ಲಿ ರಾಶಿ ಬತಾಯ, ಖೇತ್‌ಬತಾಯ ಮತ್ತು ಲಂಗ್ ಬತಾಯ ಎಂಬ ಮೂರು ರೀತಿಗಳಿದ್ದವು. ರಾಶಿ ಬತಾಯ ಪದ್ಧತಿಯು ಸುಗ್ಗಿಯ ನಂತರ ಕಾಳುಗಳನ್ನು ಹೊಡೆದು, ರಾಶಿ ಹಾಕಿದ ನಂತರ ಬೆಲೆ ಕಟ್ಟುವುದು. ಖೇತ್ ಬತಾಯ ಪದ್ಧತಿಯು ಹೊಲದಲ್ಲಿ ಬೆಳೆ ನಿಂತಿರುವಾಗಲೇ ಬೆಲೆಯನ್ನು ಕಟ್ಟುವುದು. ಲಂಗ್ ಬತಾಯ ಪದ್ಧತಿಯು ಸುಗ್ಗಿಯ ನಂತರ ಕಟಾವು ಆದಮೇಲೆ ಕಾಳುಗಳನ್ನು ಹೊಟ್ಟಿನಿಂದ ಬೇರ್ಪಡಿಸುವ ಮೊದಲೆ ಬೆಲೆಯನ್ನು ಕಟ್ಟುವುದು ಬೆಲೆಗಳನ್ನು ಸರ್ಕಾರವೇ ನಿರ್ಧರಿಸುತ್ತಿತ್ತು. ಬೆದ್ದಲು ಭೂಮಿಯನ್ನು ಅಳೆಯಲು ಕೆಲವು ಕಡೆ ಪಾಳೆಯಗಾರರು ನೇಗಿಲನ ಪದ್ಧತಿಯನ್ನು ಅನುಸರಿಸುತ್ತಿದ್ದರು. ನೇಗಿಲು ಪದ್ಧತಿಯು

ಭೂಮಿಯ ಫಲವತ್ತತೆ, ನೀರಿನ ಪೂರೈಕೆ, ಬೆಳೆಗಳಿಗೆ ಮಹತ್ವವನ್ನು ಕೊಡುತ್ತಿರಲಿಲ್ಲವಾದ್ದರಿಂದ ಈ ಪದ್ಧತಿಯು ಬಳಕೆಗೆ ಬರಲಿಲ್ಲ. ಬೆಳೆಯ ಮೇಲೆಯೇ ಕಂದಾಯವನ್ನು ವಿಧಿಸಲಾಗುತ್ತಿತ್ತೆಂದು ಬುಕಾನನು ಹೇಳಿರುತ್ತಾನೆ.

ಅಳತೆಗೋಲಿನ ಸಹಾಯದಿಂದ ಹೊಲಗಳನ್ನು ಮತ್ತರು ಮತ್ತು ಕಮ್ಮಗಳೆಂಬುದಾಗಿ ಅಳೆಯುತ್ತಿದ್ದರು. ಇವುಗಳ ಪ್ರಮಾಣವು ಊರಿಂದೂರಿಗೆ ಭಿನ್ನವಾಗಿರುತ್ತಿತ್ತು. ಒಂದು ಶಾಸನದಲ್ಲಿ ಒಂದು ಮತ್ತರಿಗೆ ೯೦೦ ಕಂಬಗಳಾದರೆ ಮತ್ತೊಂದು ಶಾಸನದಲ್ಲಿ ಒಂದು ಮತ್ತರಿಗೆ ೩೦೦ ಕಂಬಗಳಾಗಿವೆ. ಮತ್ತೊಂದರಲ್ಲಿ ಒಂದು ಮತ್ತರಿಗೆ ನೂರು ಕಂಬಗಳು ಎಂದು ತಿಳಿದುಬರುತ್ತದೆ. ಈಗ ಮತ್ತರ್ ಎಂಬ ಪದ ಪ್ರಯೋಗದ ಬದಲಿಗೆ ಎಕರೆಯನ್ನು ಬಳಸುತ್ತಿದ್ದಾರೆ. ಇದರಲ್ಲೂ ಒಂದು ಅಳತೆ ಇಲ್ಲ. ತೂಕ, ಅಳತೆ ಮತ್ತು ಭೂದಾನಗಳಲ್ಲಿ ಪ್ರಜೆಗಳಿಗೆ ಮೋಸವಾಗದಂತೆ ನೋಡಿಕೊಳ್ಳಲು ಅಧಿಕಾರಿಯಾಗಿ ಸುಭೇದಾರನು. ಸಹಾಯಕನಾಗಿ ಶಾನುಭೋಗನು ಇರುತ್ತಿದ್ದರು. ಇವುಗಳ ಮೇಲೆ ರಾಜಮುದ್ರೆ ಇರಬೇಕು.

**ಒಕ್ಕಲುತನ**

ಕೃಷಿ ಮಾಡುವವನನ್ನು 'ಒಕ್ಕಲಿಗ' ಎಂದು ಕರೆಯುವರು. ಒಕ್ಕಲುತನ ವ್ಯಾಪಾರ ಉದ್ಯೋಗ ಮತ್ತು ಕೈಕಸಬುಗಳನ್ನೊಳಗೊಂಡಿದೆ. ಬಳ್ಳಾರಿ ಪ್ರದೇಶದ ಜರಿಮಲೆಯಲ್ಲಿ ರಾಗಿ, ಭತ್ತ, ಸಜ್ಜೆ, ನವಣೆ, ಜೋಳ, ಜವೆ, ನೆಲ್ಲು, ಬರಗು, (ಬಾರ್ಲಿ) ಮುಂತಾದವುಗಳನ್ನು ಬೆಳೆಯುತ್ತಿದ್ದರು. ಕೆಲವು ಕಡೆ ಹತ್ತಿ ಹಾಗೂ ಪುಂಡಿಗಳನ್ನು ಬೆಳೆಯುತ್ತಿದ್ದರು. ದ್ವಿದಳ ಧಾನ್ಯಗಳಾದ ಹುರುಳಿ, ತೊಗರಿ, ಹೆಸರು, ಕಡಲೆ, ಅವರೆ, ಅಲಸಂದೆ, ಮಡಕೆ, ಕುಸುಬಿ, ಅಗಸೆ ಮುಂತಾದವುಗಳನ್ನು ಬೆಳೆಯುತ್ತಿದ್ದರು. ಪ್ರದೇಶದ ಪೂರ್ವಭಾಗದಲ್ಲಿ ರಾಗಿ, ಜೋಳ, ನವಣೆಗಳನ್ನು ಮೊದಲು ಬೆಳೆದು ಅನಂತರ ಬಳ್ಳಾರಿ ಸಜ್ಜೆ ಮತ್ತು ಹತ್ತಿಯನ್ನು ಬೆಳೆಯುತ್ತಿದ್ದರು. ಕೆಲವು ಗ್ರಾಮಗಳಲ್ಲಿ ಮಾತ್ರ ಭತ್ತವನ್ನು ಬೆಳೆಯುತ್ತಿದ್ದರು. ಈ ಪ್ರದೇಶದಲ್ಲಿ ಗೋಧಿ, ಜೋಳ ಹಾಗೂ ಕಬ್ಬನ್ನು ಕೃಷಿ ಹಾಗೂ ತರಿ ಭೂಮಿಗಳಲ್ಲಿ ಬೆಳೆಯುತ್ತಾರೆ. ಬಳ್ಳಾರಿ ಪ್ರದೇಶದ ಜರಿಮಲೆಯಲ್ಲಿ ಬದನೆ, ಬೆಂಡೆ, ಚಳ್ಳವರೆ, ಹೀರೇ, ಕುಂಬಳ, ಅವರೆ, ಕಲ್ಲುಪಡವಲ, ಸೌತೆ, ಹಾಗಲ, ಹಾಲುಗುಂಬಳ, ತುಪ್ಪದ ಹೀರೆ, ಮೆಣಸಿನಕಾಯಿ, ಶಮಿ, ಹರವಿ, ಕರಿಬೇವು, ರಾಜಗಿರಿ, ಸಬ್ಬಸಗೆ, ಮೆಂತೆ, ಕೊತ್ತಂಬರಿ, ಮೊದಲಾದ ಕಾಯಿಪಲ್ಲೆಗಳನ್ನು ವೀಳ್ಯದೆಲೆ ಹಾಗೂ ಅಡಕೆಯನ್ನು ದಾಳಿಂಬೆ, ಸೀಬೆ, ಕಂಚಿ, ಬಾರಿ, ಬಾಳೆ, ಸೀತಾಫಲ, ನೇರಳೆ, ಕಲ್ಲಂಗಡಿ, ಕರಬೂಜ, ಅತ್ತಿ ಮೊದಲಾದ ಹಣ್ಣುಗಳನ್ನು ಹೂವುಗಳನ್ನು ತೋಟಗಳಲ್ಲಿ ಬೆಳೆಸುತ್ತಿದ್ದರು. ಹಾಗೂ ತೆಂಗಿನ ತೋಟಗಳಿದ್ದುವೆಂದು ಬುಕಾನನ್ ಹೇಳಿದ್ದಾನೆ. ಜರಿಮಲೆಯ ಭೂಮಿ ಫಲವತ್ತಾಗಿದ್ದು ಕೃಷಿ ಉತ್ಪನ್ನಗಳಿಂದ ಜನ ತೃಪ್ತಿಯಿಂದ ಸುಖವಾಗಿದ್ದರೆಂದೂ ಆದಾಯದಿಂದ ರಾಜ್ಯ ಸಂವೃದ್ಧವಾಗಿತ್ತೆಂದೂ ತಿಳಿಯಬಹುದು.

## ನೀರಾವರಿ

ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆ. ತೂಬುಗಳನ್ನು ಅವಲಂಬಿಸಿದೆ. ಕೂಡ್ಲಿಗಿ ಮೈದಾನ ಪ್ರದೇಶವಾದ್ದರಿಂದ ಅಲ್ಲಿ ಮಳೆ ಬೀಳುತ್ತಿದ್ದುದು ಅಲೆ ಕಡಿಮೆಯಾದ್ದರಿಂದ ಕೆರೆ, ಕಾಲುವೆ, ಕೊಳಗಳನ್ನು ಕಟ್ಟಿಸುವುದು ಪುಣ್ಯದ ಕೆಲಸವಎಂದು ಜನ ನಂಬಿದ್ದರು. ಕೆರೆ ಕಟ್ಟಿಸುವುದು ಪಾಳೆಯಗಾರರ ಕಾಲಕ್ಕಿಂತ ಮೊದಲೇ ಕದಂಬರ ಪೂರ್ವದಿಂದಲೂ ನಡೆದುಬಂದಿರುವುದನ್ನು ನಾವು ಶಾಸನಗಳಿಂದ ತಿಳಿಯಬಹುದು. ಕೆರೆಯನ್ನು ಯಾರೇ ಕಟ್ಟಿಸಲಿ ಅದರ ಯೋಗಕ್ಷೇಮವನ್ನು ಊರಿನ ಜನ ನೋಡಿಕೊಳ್ಳುತ್ತಿದ್ದರು. ಇದರ ರಕ್ಷಣೆಗೆ ನೀರುಗಂಟಿಯನ್ನು ನೇಮಿಸುತ್ತಿದ್ದರು. ಗ್ರಾಮಗಳಲ್ಲಿ ಅವನಿಗೂ ಪ್ರಮುಖ ಸ್ಥಾನವಿದ್ದು ಆಯಾಗಾರರಲ್ಲಿ ಒಬ್ಬನಾಗಿದ್ದ. ಕೆರೆಗಳಿಗೆ ಕಾಲುವೆಗಳನ್ನು ನಿರ್ಮಿಸಿ ನೀರನ್ನು ದೂರದ ಜಮೀನುಗಳಿಗೆ ಕೊಂಡೊಯ್ಯುತ್ತಿದ್ದರು ಎಂಬುದನ್ನು ಶಾಸನಗಳಿಂದ ತಿಳಿಯಬಹುದು. ಬಾವಿಗಳಲ್ಲಿ ಕಡಲೆ ಬಾವಿ, ಯಾತದ ಬಾವಿ, ಇಳಿದು ಹೋಗುವ ಬಾವಿಗಳು ಮತ್ತು ಅಣೆಕಟ್ಟುಗಳು ಇದ್ದವು. ಧರ್ಮದ ಯಾತ ದೋಣೆಗಳನ್ನು ಮಾಡಿಸಿದ ಉಲ್ಲೇಖವಿದೆ.

## ಕೃಷಿ ವ್ಯವಸ್ಥೆ–ಭೂಸ್ವಾಮ್ಯ

ಭೂದಾನ ಮಾಡಿದವರೆಲ್ಲಾ ಭೂಮಿಯ ಮಾಲೀಕರೇ ಆಗಿದ್ದಾರೆ. ಇವರು ತಾವೇ ಸ್ವತಃ ಸಾಗುವಳಿ ಮಾಡುತ್ತಿರಲಿಲ್ಲ. ಕೂಲಿ ತೆಗೆದುಕೊಂಡು ಸಾಗುವಳಿ ಮಾಡುತ್ತಿದ್ದವರಿಗೆ ಗೇಣಿದಾರರು ಅಥವಾ ಗುತ್ತಿಗೆದಾರರು ಎಂದು ಕರೆಯುತ್ತಿದ್ದರು. ಗೇಣಿದಾರರ ಕೆಳಗೆ ಕೂಲಿಗಾಗಿ ದುಡಿಯುತ್ತಿದ್ದ ಜನರಿಗೆ ಜೀತದಾಳು ಎಂದು ಕರೆಯುತ್ತಿದ್ದರು. ಇದಲ್ಲದೆ ಶಾಸನಗಳಲ್ಲಿ 'ವ್ಯವಹಾರ ಚತುಷ್ಟಯ' ಎಂಬ ಪದವನ್ನು ಕಾಣುತ್ತೇವೆ. ಇದು ನಾಲ್ಕು ರೀತಿಯ ಭೂಮಿಯ ವ್ಯವಹಾರವನ್ನು ಹೇಳುತ್ತದೆ. ಕ್ರಯ, ವಿಕ್ರಯ, ಭೋಗ್ಯ ಮತ್ತು ದಾನ, ಭೂದಾನ, ತೆಗೆದುಕೊಂಡ ವ್ಯಕ್ತಿಗಳಿಗೆ ಈ ಹಕ್ಕುಗಳು ದೊರೆಯುತ್ತಿದ್ದವು.

## ಹೈನುಗಾರಿಕೆ

ಜರಿಮಲೆಯಲ್ಲಿ ದನ, ಕುರಿ, ಮೇಕೆ ಮೊದಲಾದವು ಹೆಚ್ಚಾಗಿದ್ದುದರಿಂದ ಹಾಲು, ಮೊಸರು, ಬೆಣ್ಣೆ, ತುಪ್ಪ ಸಮೃದ್ಧಿಯಾಗಿತ್ತು. ಶಾಸನಗಳಲ್ಲಿ ಕುರಿತ ತೆರಿಗೆ ಎಂಬ ಪದವು ಬರುವುದರಿಂದ ಕುರಿಸಾಕಾಣಿಗೂ ಪಾಳೆಯಗಾರರ ಕಾಲದಲ್ಲಿ ಉತ್ತೇಜನವಿತ್ತು.

## ಉತ್ಪಾದನೆ–ಕೈಗಾರಿಕೆಗಳು

ಭೂಮಿಯಲ್ಲಿ ಬೆಳೆದ ಕಚ್ಚಾ ಪದಾರ್ಥಗಳೇ ಕೈಗಾರಿಕೆಗಳ ಮೂಲ. ಕೂಡ್ಲಿಗಿಯ ಜರಿಮಲೆ ಪ್ರದೇಶಗಳಲ್ಲಿ ಎಣ್ಣೆ ಕಾಳುಗಳು ಬೆಳೆಯುತ್ತಿದ್ದರಿಂದ ಗಾಣಗಳಿದ್ದು ಅದಕ್ಕೆ ಗಾಣದೆರಿಗೆಯನ್ನು ವಿಧಿಸುತ್ತಿದ್ದರು. ದೇವಾಲಯದ ನಂದಾದೀಪಗಳಿಗೆ ಗಾಣಗಳನ್ನು ದತ್ತಿ ಬಿಡುತ್ತಿದ್ದರು. ಎತ್ತು ಗಾಣ ಮತ್ತು ಕೈಗಾಣವೆಂಬ ಎರಡು ರೀತಿಯ ಗಾಣಗಳಿದ್ದವು. ಇವುಗಳನ್ನು ಮರದಗಾಣ

ಮತ್ತು ಕಲ್ಲಿನ ಗಾಣವೆಂದು ಹೇಳುತ್ತಾರೆ. ಈ ಪ್ರದೇಶದಲ್ಲಿ ಕಪ್ಪು ಮಣ್ಣು ಇರುವುದರಿಂದ ಹತ್ತಿ ಬೆಳೆಯಲು ಅನುಕೂಲವಾಗಿದೆ. ನೇಕಾರರು ಹತ್ತಿ ಬಟ್ಟೆಯನ್ನು ಜೇಡರು ರೇಶಿಮೆ ಬಟ್ಟೆಯನ್ನು ನೇಯುತ್ತಿದ್ದರು. ಇವರು ತೋಟಿಗರು, ದೇವಾಂಗ ಜಾತಿಯವರು, ಹೊಲೆಯರು ಕೆಲವು ಕಡೆಗಳಲ್ಲಿ ಬಟ್ಟೆಯನ್ನು ನೇಯುತ್ತಿದ್ದರು. ನೇಕಾರರು ಮಗ್ಗದೆರೆಯನ್ನು ಕೊಡುತ್ತಿದ್ದರೆಂಬುದನ್ನು ಶಾಸನಗಳಿಂದ ತಿಳಿಯಬಹುದು. ಗರಿಗಳಿಂದ ಚಾಪೆ, ತಡಿಕೆ, ಕಸಬರಿಗೆ ಮುಂತಾದವುಗಳನ್ನು ಮಾಡುವುದು. ನಾರಿನಿಂದ ಹಗ್ಗ ಮತ್ತು ಇತರ ಉಪಯುಕ್ತ ವಸ್ತುಗಳನ್ನು ಮಾಡುವುದು. ಕರಟಗಳಿಂದ ಅಡಿಗೆ ಮನೆಗೆ ಬೇಕಾಗುವ ವಸ್ತುಗಳನ್ನು ಮಾಡುವ ಉತ್ಪಾದನೆಯಿಂದ ಇಲ್ಲಿಯ ಜನರು ಆದಾಯ ಉತ್ತಮವಾಗಿದ್ದಿತ್ತು.

**ಅಳತೆ ಮತ್ತು ತೂಕಗಳು**

ಖಂಡುಗ, ಕೊಳಗ, ಬಳ್ಳ, ಸೊಲಿಗೆ, ಸೊಟ್ಟಿಗೆ, ಸೊಳಸೆ, ಸೊಂಟಿಗೆ, ಮಣ, ಮಾನ, ಪಳಿಗೆ, ಅರ್ಧ, ಸೊಲಿಗೆ, ಪಂಚಕ ಮೊದಲಾದ ಅಳತೆಗಳಿದ್ದವು. ಸಾಮಾನ್ಯವಾಗಿ ಹತ್ತಿ, ಶುಂಠಿ, ಅರಿಶಿನ, ಮೆಣಸು, ಸಕ್ಕರೆ, ಮೆಣಸಿನಕಾಯಿ, ಬೆಲ್ಲ ಮೊದಲಾದವುಗಳು ಮಣದ ಅಳತೆಯಲ್ಲಿ ವ್ಯಾಪಾರವಾಗುತ್ತಿದ್ದವು. ಕೊಳಗದಲ್ಲಿ ಧರ್ಮಕೊಳಗ, ದೇವರ ಕೊಳಗ ಇತ್ತೆಂಬುದು ಶಾಸನಗಳಿಂದ ತಿಳಿದುಬರುತ್ತದೆ. 'ಕೊಳಗಮಾನ್ಯ'ವೆಂಬ ಮರ್ಯಾದೆಯೂ ಇತ್ತು. ಕೊಳಗದ ಅಳತೆಯನ್ನು ವೃತ್ತಿಯಾಗಿಟ್ಟುಕೊಂಡುದುದರಿಂದ ಕೊಳಗದ ಚೌಡಯ್ಯ ಕೊಳಗದ ಸೋಮಯ್ಯ ಎಂಬ ಹೆಸರುಗಳನ್ನು ಶಾಸನಗಳಲ್ಲಿ ಕಾಣುತ್ತೇವೆ. ಅಲ್ಲದೆ 'ಕೊಳಗದೆರಿಗೆ' ಕೊಳಗದಾಯಗಳು ಇದ್ದವು. ಎಣ್ಣೆ ತುಪ್ಪಗಳಂತಹ ದ್ರವ ಪದಾರ್ಥಗಳನ್ನು ಅಳೆಯಲು ಸೊಲುಗೆಯನ್ನು ಉಪಯೋಗಿಸುತ್ತಿದ್ದರು. ಇಲ್ಲಿಯ ಶಾಸನಗಳಲ್ಲಿ ಬರುವ ಸೊಂಟಿಗೆ ಎಣ್ಣೆ ಸೊಲಿಗೆ ಎಣ್ಣೆ, ಎಣ್ಣೆ ಸೊಳಸಂ ಇದನ್ನು ಸ್ಪಷ್ಟಪಡಿಸುತ್ತದೆ. ಬೆಲ್ಲದ ಅಚ್ಚು, ಅಡಿಕೆ, ಎಲೆ, ತೆಂಗಿನಕಾಯಿ, ಹಣ್ಣುಗಳನ್ನು ಎಣಿಸಿಕೊಡುತ್ತಿದ್ದರು. ಕಂದಾಯವನ್ನು ಧಾನ್ಯ ಮತ್ತು ದ್ರವ್ಯ ರೂಪಗಳಲ್ಲಿ ವಸೂಲು ಮಾಡುವ ಪದ್ಧತಿಯು ಪಾಳೇಗಾರರ ಕಾಲದಲ್ಲಿಯೂ ಇತ್ತು. ಜರಿಮಲೆಯಲ್ಲಿ ಭೂಕಂದಾಯವು ಭೂಮಿಯ ಹುಟ್ಟುವಳಿಯು ಮೂರನೇ ಒಂದು ಭಾಗವನ್ನು ಮೀರುತ್ತಿರಲಿಲ್ಲ. ಇವರು 'ರಸ್ತು' ಎಂಬ ಕಂದಾಯವನ್ನು ವಸೂಲು ಮಾಡುತ್ತಿದ್ದರು. ಇದು ಸೈನ್ಯಕ್ಕಾಗಿ ಧಾನ್ಯ ಮತ್ತು ದ್ರವ್ಯ ಎರಡು ರೂಪಗಳಲ್ಲಿ ವಸೂಲಾಗುತ್ತಿತ್ತು. ಇದಲ್ಲದೆ ಅನೇಕ ತೆರಿಗೆಗಳಿಂದ ರಾಜ್ಯಕ್ಕೆ ಆದಾಯ ಬರುತ್ತಿತ್ತು. ವ್ಯಾಪಾರಿಗಳಿಗೆ ಸೀಮೆಯ ಪ್ರಮುಖ ಅಧಿಕಾರಿಯಿಂದ ಪರವಾನಗಿ ಸಿಗುತ್ತಿತ್ತು. ರಾಜ್ಯದಲ್ಲಿ ಸರಕು ಸಾಗಣಿಕೆಗೆ ನಿರ್ಬಂಧಗಳು ವಿರಳವಾಗಿದ್ದವು. ರಸ್ತೆ ನಿರ್ಮಾಣ ನಿರ್ವಹಣೆಗೆ ರಸ್ತೆ ತೆರಿಗೆ ವಸೂಲಿಯಾಗುತ್ತಿತ್ತು. ಸ್ಥಳೀಯ ಸಂಸ್ಥೆಗಳಿಗೆ ರಸ್ತೆ ದುರಸ್ತಿಗೆ ಹಣ ವ್ಯಯ ಮಾಡುತ್ತಿದ್ದವು. ಆಂತರಿಕ ವ್ಯಾಪಾರದ ಮುಖ್ಯ ಮಾಧ್ಯಮ ಎತ್ತಿನ ಬಂಡಿಗಳಾಗಿದ್ದವು. ಹೇರೆತ್ತುಗಳ ಮೂಲಕ ಊರಿಂದೂರಿಗೆ ವ್ಯಾಪಾರ ನಡೆಯುತ್ತಿತ್ತು. ವ್ಯಾಪಾರಿಗಳು ಎತ್ತುಗಳ ಸಮೂಹದೊಂದಿಗೆ ವ್ಯಾಪಾರ ಚಟುವಟಿಕೆಗಳಲ್ಲಿ ನಿರತರಾಗಿರುತ್ತಿದ್ದರು.

**ಭೂ ಹಿಡುವಳಿ**

ಇದಕ್ಕೆ ಸಂಬಂಧಿಸಿದಂತೆ ವ್ಯಕ್ತಿಯೊಬ್ಬರು ಆದಾಯದ ಚೌಕಟ್ಟಿನ ಭೂಹಿಡುವಳಿ ಹೊಂದಬಹುದಿತ್ತು. ಈ ಕ್ರಮವು ಜರಿಮಲೆ ಪಾಳೆಯಗಾರರಿಂದ ಮನ್ನಣೆ ಪಡೆದಿತ್ತು. ಈ ಹಿನ್ನೆಲೆ ಗಮನಿಸಿದಾಗ ರೈತರೇ ಭೂಮಾಲೀಕರಾಗಿದ್ದರು. ಆದರೆ ವಾರಸುದಾರರಿಲ್ಲದ ಭೂಮಿಯನ್ನು ಪಾಳೆಯಗಾರರು ತಮ್ಮ ಇಚ್ಚೆಯಂತೆ ದಾನ ನೀಡುವ ಅಧಿಕಾರವನ್ನು ಹೊಂದಿದ್ದರು. ಈ ಅವಧಿಯಲ್ಲಿ ಮುಖ್ಯವಾಗಿ ಎರಡು ವಿಧದ ಹಿಡುವಳಿಗಳನ್ನು ಗುರುತಿಸಬಹುದು.

೧. ಸಾಗುವಳಿಯ ಭೂಮಿ

೨. ಸಾಗುವಳಿಯಾಗದ ಬೀಳು ಭೂಮಿ

ಇವುಗಳಲ್ಲಿ ಸಾಗುವಳಿ ಭೂಮಿಯನ್ನು ಪಾಳೆಯಗಾರರು ದೇವಾಲಯಗಳಿಗೆ, ಬ್ರಾಹ್ಮಣರಿಗೆ, ಸಾಧಕರಿಗೆ, ಇತರರಿಗೆ ದಾನ ನೀಡುವ ಪರಿಪಾಠವನ್ನು ಹಮ್ಮಿಕೊಂಡಿದ್ಧರು. ಸಾಗುವಳಿಯಾಗದ ಬೀಳು ಭೂಮಿಯಲ್ಲಿ ಅರಣ್ಯ ಪ್ರದೇಶ ಬೀಳು ಭೂಮಿ ಬೆಟ್ಟ ಗುಡ್ಡಗಳು ಬಂಜರು ಭೂಮಿಗಳು ಸೇರ್ಪಡೆಯಾಗಿದ್ದವು. ಕೃಷಿ ಪ್ರಧಾನವಾದ ಈ ಭಾಗದಲ್ಲಿ ಭೂ ಒಡೆತನವು ಪ್ರತಿಷ್ಟೆಯಂತೆ ಕಂಡುಬರುತ್ತದೆ. ಖಾಸಗಿ ಒಡೆತನದ ಭೂಮಿ ಹೊಂದಿದ್ದರೂ ಪಾಳೆಯಗಾರರು ಅಂತಿಮವಾಗಿ ಸಮಸ್ತ ಭೂಮಿಯ ಒಡೆಯರಾಗಿರುತ್ತಿದ್ದರು. ಪಾಳೆಯಗಾರರು ಭೂ ಹಿಡುವಳಿಯನ್ನು ಪರರಿಗೆ ಒಪ್ಪಿಸುವಾಗ ಕ್ರಯ, ಭೋಗ್ಯದಾನ ಮೊದಲಾದ ವಿಧಾನಗಳನ್ನು ಅನುಸರಿಸುತ್ತಿದ್ದರೆಂದುಶಾಸನಗಳಲ್ಲಿ ಪ್ರಸ್ತಾಪವಿದೆ. ಪಾಳೆಯಗಾರರು ಬ್ರಾಹ್ಮಣರಿಗೆ, ಆಚಾರ್ಯರಿಗೆ, ಯೋಧರಿಗೆ ಭೂ ದಾನ ಮಾಡಿದುದನ್ನು ಶಾಸನಗಳು ತಿಳಿಸುತ್ತವೆ. ದೇವಾಲಯಗಳಿಗೆ ಭೂಮಿ ಮತ್ತು ಗ್ರಾಮಗಳನ್ನು ತಮಗೆ ತಮ್ಮ ತಂದೆ ತಾಯಿಗಳಿಗೆ ಪುಣ್ಯ ಬರಲೆಂದು ಜರಿಮಲೆ ಪಾಳೆಯಗಾರರು ದಾನ ದತ್ತಿಗಳನ್ನು ನೀಡುತ್ತಿದ್ದರು.

**ಸಿ. ಜರಿಮಲೆ ಪಾಳೆಯಗಾರರ ಸಾಮಾಜಿಕ ವ್ಯವಸ್ಥೆ**

**ವರ್ಗ–ವರ್ಣ–ಜಾತಿ**

ಎಲ್ಲ ಕಾಲಗಳಲ್ಲಿಯೂ ಸಮಾಜದಲ್ಲಿ ಪ್ರಭುವರ್ಗ ಮತ್ತು ಶ್ರಮಿಕರ ವರ್ಗ ಎಂಬ ಎರಡು ಭಾಗಗಳಿದ್ದುದು ಕಂಡುಬರುತ್ತದೆ. ಅದರಂತೆ ಪ್ರಭುವರ್ಗದಲ್ಲಿ ರಾಜ, ಪುರೋಹಿತ, ಪ್ರಧಾನಿ ಹಾಗೂ ಇತರ ಅಧಿಕಾರಿಗಳನ್ನು ಒಳಗೊಂಡಿದ್ದರೆ. ಶ್ರಮಿಕ ವರ್ಗದಲ್ಲಿ ವಿವಿಧ ವೃತ್ತಿಗಳನ್ನು ಕೈಗೊಂಡಿದ್ದ ಜನಸಾಮಾನ್ಯರನ್ನು ಒಳಗೊಂಡಿರುತ್ತದೆ. ವ್ಯಾಪಾರಿಗಳು ಈ ಎರಡು ವರ್ಗಗಳ ಮಧ್ಯದಲ್ಲಿದ್ದರೂ, ತಮ್ಮ ಆರ್ಥಿಕ ಬಲದಿಂದ ಪ್ರಭುವರ್ಗಕ್ಕೆ ಸೇರುತ್ತಾರೆ. ಸಮಾಜ ವ್ಯವಸ್ಥೆಯಲ್ಲಿ ಉನ್ನತ ಸ್ಥಾನವನ್ನು ಪುರೋಹಿತರಿಗೆ ಕೊಡಲಾಗಿದೆ ಎಂದು ಧರ್ಮಶಾಸ್ತ್ರಗಳಲ್ಲಿದೆ. ಇವರು ರಾಜಧರ್ಮ ಹಾಗೂ ಸಮಾಜ ಧರ್ಮಗಳನ್ನು ನಿಯಂತ್ರಿಸುತ್ತಿದ್ದರು.

### ಪ್ರಭುವರ್ಗ–ಪುರೋಹಿತರು

ಇವರು ಸಮಾಜದಲ್ಲಿ ಅಗ್ರಸ್ಥಾನವನ್ನು ಪಡೆದಿದ್ದರು. ಬಳ್ಳಾರಿ ಪ್ರಾಂತದಲ್ಲಿ ಬ್ರಾಹ್ಮಣರು ನೆಲೆಗೊಳ್ಳುವಂತೆ ಏರ್ಪಡಿಸಿ ಅವರು ಷಟ್ಕರ್ಮಗಳಲ್ಲಿ ನಿರತರಾಗಿರುವಂತೆ ಸಾಕಷ್ಟು ದಾನ–ದತ್ತಿಗಳನ್ನು ನೀಡಿ ಗೌರವಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಇವರು ರಾಜಕೀಯದಲ್ಲಿಯೂ ಪ್ರಮುಖ ಸ್ಥಾನವನ್ನು ಪಡೆದಿದ್ದರು. ಅನೇಕ ಬ್ರಾಹ್ಮಣರು ಉನ್ನತ ಹುದ್ದೆಯಲ್ಲಿದ್ದರು. ಬಳ್ಳಾರಿ ಕೂಡ್ಲಿಗಿಗಳಲ್ಲಿ ವೀರಶೈವದವರ ಸಂಖ್ಯೆ ಹೆಚ್ಚಾಗಿ ಇದ್ದಿತು. ಅಲ್ಲದೆ ಅವರು ಐಶ್ವರ್ಯವಂತ ರಾಗಿದ್ದುದರಿಂದ ಬಹಳ ಪ್ರಭಾವಶಾಲಿಗಳಾಗಿ ಇದ್ದರು. ಇವರು ಪಟ್ಟಣಗಳಲ್ಲೂ, ಹಳ್ಳಿಗಳಲ್ಲೂ ನೆಲಸಿದ್ದುದರಿಂದ ವ್ಯಾಪಾ ಹಾಗೂ ವ್ಯವಸಾಯಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದರು. ಇವರಲ್ಲಿ ಅನೇಕ ಉಪಜಾತಿಗಳಿವೆ. ಮಹಾನಾಡ ಪ್ರಭುಗಳು ವೀರಶೈವ ಗುರುಗಳಲ್ಲಿ ಅನನ್ಯ ಭಕ್ತಿಯುಳ್ಳವರಾಗಿದ್ದರು ಅವರಿಗೆ ಅನೇಕ ಮಠಗಳನ್ನು ಕಟ್ಟಿಸಿ ಕೊಟ್ಟಿದ್ದಾರೆ. ಇವರು ಶಿವಾಚಾರ ಸಂಪನ್ನರಾದ ಗುರುಗಳಿಗೆ ಗ್ರಾಮಗಳನ್ನು ದತ್ತಿ ಕೊಟ್ಟು ಗೌರವಿಸಿದ್ದಾರೆ.

### ಶ್ರಮಿಕ ವರ್ಗ

ಅಕ್ಕಸಾಲಿ, ಬಡಗಿ, ಕಮ್ಮಾರ, ಕುಂಬಾರ, ಶಿಲ್ಪಿ, ಕಂಚುಗಾರ, ಅಗಸ, ಉಪ್ಪಾರ, ಸಣ್ಣಕಲ್ಲಿನವ, ಮಾದಿಗ, ಕೆಲಸಿಗ ಮುಂತಾದವರು ಈ ವರ್ಗಕ್ಕೆ ಸೇರುತ್ತಾರೆ. ಅಕ್ಕಸಾಲಿಗರು ಚಿನ್ನದ ಕೆಲಸದ ಜೊತೆಗೆ ಶಿಲಾಶಾಸನ ತಾಮ್ರ ಶಾಸನಗಳನ್ನು ಕೆತ್ತುವುದು, ನಾಣ್ಯಗಳನ್ನು ತಯಾರಿಸುವುದು ಕೆಲಸಗಳನ್ನು ಮಾಡುತ್ತಿದ್ದರು. ಭರಮಣ್ಣನಾಯಕನು ಕಟ್ಟಿಸಿದ ಚಿನ್ನದ ಮನೆಯಲ್ಲಿ ಅಕ್ಕಸಾಲಿಗರು ನಾಣ್ಯಗಳನ್ನು ತಯಾರಿಸುತ್ತಿದ್ದರೆಂದು ಹಿಂದೆಯೇ ಹೇಳಿದೆ. ಕಂಚುಗಾರರು ಕಂಚು ಮತ್ತು ಹಿತ್ತಾಳೆಯ ಪಾತ್ರೆಗಳನ್ನು, ಸಾಮಾನುಗಳನ್ನು ತಯಾರಿಸುತ್ತಿದ್ದರು. ಮರಗೆಲಸ ಮಾಡುವ ಬಡಗಿಯರು ಜೀರ್ಣೋದ್ಧಾರದ ಕೆಲಸವನ್ನು ಮಾಡುತ್ತಿದ್ದರು. ಈ ಒಂದೊಂದು ಒಳಪಂಗಡಗಳಲ್ಲಿಯೂ ಅನೇಕ ಉಪ ವಿಭಾಗಗಳಿದ್ದು ಅವುಗಳನ್ನು 'ಬೆಡಗು' ಎಂದು ಕರೆಯುತ್ತಿದ್ದರು. ಊರುಗಳ ರಚನೆ ಮತ್ತು ಕೆರೆಕಟ್ಟೆಗಳ ರಚನೆಯನ್ನು ಬಹಳ ವ್ಯವಸ್ಥಿತವಾಗಿ ಮಾಡುತ್ತಿದ್ದರು. ಅಲ್ಲದೆ ಜರಿಮಲೆ ಪಾಳೆಯಗಾರರು ತಮ್ಮದೇ ಆದ ವೃತ್ತಿ ಸಂಘಗಳನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಿದ್ದರೆಂಬುದನ್ನು ಕೈಫಿಯತ್ತುಗಳಲ್ಲೂ ಹಾಗೂ ಶಾಸನಗಳಿಂದ ತಿಳಿಯಬಹುದು.

### ಜಾತಿ ವ್ಯವಸ್ಥೆ

ಶ್ರಮಜೀವಿಗಳು ತಮ್ಮ ವಂಶಪಾರಂಪರ್ಯವಾಗಿ ಬಂದ ವೃತ್ತಿ ವೈಶಿಷ್ಟ್ಯವನ್ನು ಉಳಿಸಿಕೊಳ್ಳುವ ಭಿನ್ನತೆಯೇ ಜಾತಿ ವ್ಯವಸ್ಥೆಗೆ ದಾರಿಮಾಡಿಕೊಟ್ಟಿತು. ಈ ವೃತ್ತಿ ನಿರತ ಜಾತಿಗಳನ್ನು 'ಫಣ'ಗಳೆಂದು ಕರೆಯುತ್ತಿದ್ದರು. ಹಿಂದೆ ಸಾಂಪ್ರದಾಯಿಕವಾಗಿ ಹದಿನೆಂಟು ಜಾತಿಗಳಿದ್ದವು. ಅವುಗಳಲ್ಲಿ ಎಡಗೈ ಜಾತಿ ಮತ್ತು ಬಲಗೈ ಜಾತಿ ಎಂಬ ವಿಂಗಡಣೆಗಳಿದ್ದವು ಎಂಬುದನ್ನು ಪಿ.ವಿ. ನಾರಾಯಣ ಅವರು ಹೇಳಿದ್ದಾರೆ. ಹಾಗೂ ಅವುಗಳಲ್ಲಿ ಕಾಲ ಕಾಲಕ್ಕಾದ ವ್ಯತ್ಯಾಸಗಳನ್ನು ಕೊಟ್ಟಿದ್ದಾರೆ.

ಕೃಷಿ, ವ್ಯಾಪಾರ ಹಾಗೂ ಕರಕುಶಲ ಕಲೆಗೆ ಸೇರಿದ ವೃತ್ತಿಪರ ಜಾತಿಗಳು ಇವುಗಳಲ್ಲಿ ಸೇರಿದ್ದವು. ಆದರೆ ಬ್ರಾಹ್ಮಣ, ಕ್ಷತ್ರಿಯ ಮತ್ತು ಶೂದ್ರ ಜಾತಿಗಳು ಇವುಗಳಲ್ಲಿ ಸೇರಿರಲಿಲ್ಲ. ರೈಸ್, ಬುಕಾನನ್ ಈ ಇಬ್ಬರು ಕೊಟ್ಟಿರುವ ಪಟ್ಟಿಗಳ ನಡುವೆ ಕಿಂಚಿತ್ ವ್ಯತ್ಯಾಸವಿದೆ. ಆದರೆ ಅನೇಕ ವೇಳೆ ಹದಿನೆಂಟಕ್ಕೂ ಹೆಚ್ಚಿನ ವೃತ್ತಿಪರ ಜಾತಿಗಳು ಹದಿನೆಂಟು ಫಣದ ಒಂದು ವಿಭಾಗಕ್ಕೆ ತಮ್ಮನ್ನು ಸೇರಿಸಿಕೊಳ್ಳುವ ಸಂಪ್ರದಾಯವಿತ್ತೆಂದು ರೈಸ್‌ರವರು ಹೇಳಿದ್ದಾರೆ. ಎಲ್ಲಾ ಜಾತಿಗಳಿಗಿಂತ ಕೆಳಗಿನ ಜಾತಿ ಹೊಲೆಯರದು, ಮಾದಿಗರದು. ಅವರು ವಾಸಿಸುತ್ತಿದ್ದ ಸ್ಥಳವನ್ನು 'ಹೊಲಗೇರಿ' ಎಂದು ಕರೆಯುತ್ತಿದ್ದರು.

**ದಾಂಪತ್ಯ**

ದಾನ ಧರ್ಮಗಳಲ್ಲಿ ದಂಪತಿಗಳು ಪರಸ್ಪರ ಒಮ್ಮತದಿಂದಲೇ ಭಾಗಿಗಳಾಗಬೇಕಾಗಿದ್ದಿತು. ದಾನದತ್ತಿಗಳನ್ನು ನೀಡುವಾಗ ಪತ್ನಿಯ ಸಮ್ಮತಿಯು ಅಗತ್ಯವಿದ್ದಿತು. ರಾಜಮನೆತನದ ಮಹಿಳೆಯರಲ್ಲಿ ಕೆಲವರು ರಾಜತಂತ್ರದಲ್ಲಿ ನಿಪುಣರಾಗಿದ್ದು ಆಡಳಿತದ ವಿಷಯದಲ್ಲಿ ಸಲಹೆ ಸೂಚನೆಗಳನ್ನು ನೀಡುತ್ತಿದ್ದರೆಂದು ಹೇಳಬಹುದು.

**ಸತಿ ಪದ್ಧತಿ**

ಬಳ್ಳಾರಿ ಪ್ರಾಂತ್ಯದ ಕೂಡ್ಲಿಗಿಯ ಜರಿಮಲೆ ಪಾಳೆಗಾರರಲ್ಲಿ ಸತಿ ಪದ್ಧತಿಯನ್ನು ಅಳವಡಿಸಿಕೊಂಡ ಬಗ್ಗೆ ಶಾಸನಗಳಲ್ಲಿ ಯಾವ ಮಾಹಿತಿಯು ಸಿಗದಿದ್ದರೂ ಇ.ಚಿ. ಭೂ. ಸಾಂಗತ್ಯದಲ್ಲಿ ಹಂಪಿಯ ಕಾಳಗದಲ್ಲಿ ಇ.ಚಿ. ಭೂ.ನ ಕುಮಾರ ತೋಂಟೇಂದ್ರನು ಮಡಿದಾಗ ಆತನ ಹೆಂಡತಿ ಚೆನ್ನಬಸಮ್ಮನು ತನ್ನ ಪತಿಯ ವೀರಮರಣದ ಸುದ್ಧಿ ಕೇಳಿ ಎಡಗೈಯ ಮಣಿಗನ್ನಡಿ ಬಲಗೈಯೊಳು ಹಿಡಿದಲಗುವ ಜಮದಾಡೆ, ಮುಡಿದ ಗರಿಯ ಬಾಸಿಗವ ಮರಿದ ರನ್ನದೊಡನೆ "ಗಳಿಂದ ಶೋಭಿತಳಾಗಿ ನರ್ತಿಸಿದಳು ನಲಿದಳು ಮನದನ್ನನ ಮೂರ್ತಿಯ, ವಿಮಲ ಸದ್ಗುಣವ ಕೀರ್ತಿ ಸುತಾ ಸತಿ ಮಾಸತಿಯಾಗಿ ಪ್ರವರ್ತಿಸಿದುದನೇನೆಂದೆ" ಎಂದು ಕವಿ ಉದ್ಗಾರ ಮಾಡಿದ್ದಾನೆ. ಮಡಿದ ಗಂಡನನ್ನು ಕುರಿತ ನೋಡಲೀವನೆ ನಿನ್ನ ಮೊಗದವರೆಗೆ ಒಮ್ಮೆ ನೋಡೆನ್ನ ಪಂಥವನಾಣ್ಮ ಆಡಿದೊಡೇನಹುದೀಗಳೇ ನಿನ್ನೊಡಗೂಡಿ ನಿನ್ನನೇ ಮೆಚ್ಚಿಸುವೆನು" ಎಂದು ಗಂಡನನ್ನು ಹಿಂಬಾಲಿಸಲು ತಾನು ತೆಗೆದುಕೊಂಡ ನಿರ್ಧಾರವನ್ನು ವ್ಯಕ್ತಪಡಿಸಿದ್ದಾಳೆ. ಅತ್ತೆ ಮಾವಂದಿರ ಪಾದಕ್ಕೆರಗಿ ತನ್ನ ಚಿತ್ತವಲ್ಲಭನ ಮೂರ್ತಿಯನ್ನು ಚಿತ್ತ ದೊಳಿಟ್ಟು ಜಾನಿಸುತೆ ಶ್ರೀ ಗುರುರಾಯ ನಿತ್ತಲಿಂಗಕೆ ಪೊಡಮಡುತೆ ಮಹಾಸತಿಯಾದಳು.

ಸಹಗಮನ ಪದ್ಧತಿ ಅಕಾಲದಲ್ಲಿ ಇತ್ತೆಂದ ಮೇಲೆ ಸಾಮಾನ್ಯ ಜನರಲ್ಲೂ ಇದ್ದಿರಬಹುದು. ಆದರೆ ಬಹಳ ಕಡಿಮೆ ಸಂಖ್ಯೆಯಲ್ಲಿ.

**ಸ್ತ್ರೀಯರ ಸ್ಥಾನಮಾನ**

ಜರಿಮಲೆ ಪಾಳೆಯಗಾರರ ಸ್ತ್ರೀಯರಲ್ಲಿ ಕೆಲವರು ರಾಜಕೀಯ, ಧಾರ್ಮಿಕ ಹಾಗೂ

ಸಾಮಾಜಿಕ ಕ್ಷೇತ್ರಗಳಲ್ಲಿ ಕೆಲಸ ಮಾಡಿರುವುದು ಶಾಸನಗಳ ಆಧಾರದಿಂದ ಈಗಾಗಲೇ ತಿಳಿದಿದ್ದೇವೆ. ನಾಗತಿಯರು ಆಡಳಿತ ಕ್ಷೇತ್ರದಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಮಾಡಿರುವ ಕೆಲಸಗಳ ಪರಿಚಯವನ್ನು ಶಾಸನಗಳು ಕೊಡುತ್ತವೆ. ಕೆಲವು ನಾಗತಿಯರು ತಮ್ಮ ಕಾರ್ಯಗಳಿಂದ ಧೈರ್ಯದಿಂದ, ಶೌರ್ಯದಿಂದ, ಮುತ್ಸದ್ದಿತನದಿಂದ ಉತ್ತಮ ಸ್ಥಾನಗಳಿಸಿಕೊಂಡಿದ್ದರು.

## ದೇವದಾಸಿಯರು



"ದೇವಾಲಯದಲ್ಲಿ ಅಂಗಭೋಗ, ರಂಗಭೋಗಗಳ ಸೇವೆ ಹೆಚ್ಚಿದಂತೆ ದೇವಾಲಯದ ಸೇವೆಗೆ ಮದುವೆಯಾಗದ ಹೆಣ್ಣು ಮಗಳನ್ನು ಬಿಡುತ್ತಿದ್ದರು. ಇವರನ್ನು ದೇವದಾಸಿಯರು ಎಂದು ಭಕ್ತಿಯಿಂದ ಮರ್ಯಾದೆಯಿಂದ ಕರೆಯುತ್ತಿದ್ದರು."[೨೩] ಇವರು ಸಾಮಾನ್ಯ ವೇಶ್ಯೆಯರಿಗಿಂತ ಭಿನ್ನವಾಗಿ ತಮ್ಮದೇ ಆದ ಒಂದು ಬಗೆಯ ಸಾಮಾಜಿಕ ನಿಯಮ ಪಾಲಿಸಿಕೊಂಡು ಬರುತ್ತಿದ್ದರು. ಬೇಡ, ಬೋಯ ಹಾಗೂ ಹರಿಜನರಲ್ಲಿ ಈ ಪದ್ಧತಿ ಇರುವುದು ಸರ್ವೇಸಾಮಾನ್ಯವಾಗಿತ್ತು. ದೇವರನ್ನು ಮದುವೆಯಾದ ಅವಳು ಎಂದೆಂದಿಗೂ ಮುತ್ತೈದೆಯೇ ಆಗಿರುವಳು. ವೈಷ್ಣವ, ಶೈವ ದೇವಾಲಯಗಳಲ್ಲಿ ಮಾತ್ರವಲ್ಲದೆ ಜೈನ ಬಸದಿಗಳಲ್ಲೂ, ಬೌದ್ಧ ಪಗೋಡಾಗಳಲ್ಲೂ ಈ ಪದ್ಧತಿ ಇದ್ದುದು ತಿಳಿದುಬರುತ್ತದೆ. ಇವರಿಗೆ 'ಪಾತ್ರ'ದವರೆಂದೂ ಹೆಸರಿತ್ತು. ಇವರಿಗೂ ವೇಶ್ಯಯರಿಗೂ ಇದ್ದ ವ್ಯತ್ಯಾಸವೆಂದರೆ, ಇವರು ನಾಟ್ಯ, ಸಂಗೀತ ಹಾವ ಭಾವಗಳಿಂದ ಸೇವೆ ಮಾಡಿದರೆ ವೇಶ್ಯೆಯರು ಇತರ ಸೇವೆಗಳನ್ನು ಮಾಡುತ್ತಿದ್ದರು.

ಶ್ರೀಮಂತರ, ಅಧಿಕಾರಿಗಳ ಮನೆಗಳಲ್ಲಿ ಮದುವೆಯಾದರೆ, ಊರಿನ ಧಾರ್ಮಿಕ ಕಾರ್ಯಗಳಲ್ಲಿ ಇವರಿಗೆ ಅಗ್ರಸ್ಥಾನವಿರುತ್ತಿತ್ತು. ಮೆರವಣಿಗೆ ಮುಂದುಗಡೆ ಇವರು ನೃತ್ಯ ಮಾಡುತ್ತಾ ಹೋದರೆ ಉಳಿದವರು ಅನುಸರಿಸುತ್ತಿದ್ದರು. ಇವರಿಗೆ ದಾನ ದತ್ತಿಗಳನ್ನು ಕೊಡುತ್ತಿದ್ದರು. ಇವರಿಗೆ ಮತ್ತೊಂದು ಹೆಸರು ಬಂಗಾರದವರು. ಬಂಗಾರದವರ ಸಹಾಯ ಪಡೆದು ರಾಜನ ಶತ್ರುಗಳನ್ನು ಹಿಡಿದ ಉದಾಹರಣೆಗಳು ಇವೆ. ಇವರ ಮಕ್ಕಳಿಗೆ ಸಮಾಜದಲ್ಲಿ ಸ್ಥಾನವಿತ್ತೆಂದು ಕಾಣುತ್ತದೆ. ಒಂದು ಯುದ್ಧದಲ್ಲಿ ಮಡಿದ ನಾಲ್ಕು ಜನ ವೀರರಲ್ಲಿ ಸೂಳೆಕಾಳಿಯ ಮಗ ಹೆಡವಳನೂ ಒಬ್ಬನು. ಒಂದು ಶಾಸನದಲ್ಲಿ ವೇಶ್ಯೆಯ ಸಂತತಿಯ ಪಟ್ಟಿಯೇ ಇದೆ. ವೇಶ್ಯಾವೃತ್ತಿಯನ್ನು ನಡೆಸಲು ಸರಕಾರದ ಅನುಮತಿಯನ್ನು ಪಡೆಯಬೇಕಿತ್ತು. ಅವರ ಮೇಲೆ ಸರಕಾರವು ತೆರಿಗೆಯನ್ನು ಹಾಕುತ್ತಿತ್ತು. ಇದನ್ನು ಶಾಸನಗಳಲ್ಲಿ ಸೂಳೆದೆರೆ, ಸೂಳೆದೆರೆಗೆ ಮತ್ತೊಂದು ಹೆಸರು ಕನ್ನಡಿ ವಣ ಆಯಾ ವೃತ್ತಿಗಳವರು ತಮ್ಮ ತಮ್ಮ ಕೇರಿಗಳಲ್ಲಿ ವಾಸಿಸುತ್ತಿದ್ದಂತೆ ಇವರೂ ಸೂಳೆಗೇರಿಯಲ್ಲಿ ವಾಸಿಸುತ್ತಿದ್ದರು.

## ಆತ್ಮಬಲಿದಾನ

ಕೆಲ ನಿಷ್ಠಾವಂತ ಸೇವಕರು ತಮ್ಮ ಒಡೆಯನಿಗಾಗಿ ಧೈರ್ಯದಿಂದ ನಿಷ್ಠೆಯಿಂದ ತಮ್ಮನ್ನು ತಾವೇ ಬಲಿ ಕೊಡುತ್ತಿದ್ದರು. ಇದನ್ನೇ ಆತ್ಮಬಲಿದಾನ ಎನ್ನುವುದು. ಆತ್ಮಬಲಿಯಲ್ಲಿ

ಅನೇಕ ರೀತಿಗಳಿವೆ. ಧರ್ಮವಾಳಿ, ಜೋಳವಾಳಿ, ಲೆಂಕವಾಳಿ, ವೇಳೆವಾಳಿ, ಸಹಗಮನವು ಒಂದು ರೀತಿಯ ಆತ್ಮಬಲಿದಾನವೇ ಪೂರ್ವ ಪಾಳೆಯಗಾರರ ಕಾಲದ ಶಾಸನಗಳಲ್ಲಿ ಈ ವಾಳಿಗಳ ಉಲ್ಲೇಖ ನಮಗೆ ಸಿಗುವುದಿಲ್ಲ. ಆದರೆ ಸಾಹಿತ್ಯಗಳಲ್ಲಿ ದೊರೆಯುತ್ತವೆ. ರಾಜನಿಗೆ ಪತಿವ್ರತೆಯಾದ ಗರ್ಭಿಣಿಯೊಬ್ಬಳನ್ನು ಬಲಿಕೊಟ್ಟರೆ ಕಂಭವು ನಿಲ್ಲುವುದು ಎಂದು ಕನಸಾಯಿತು. ಊರಿನ ಜನಕ್ಕೆ ಈ ವೃತ್ತಾಂತ ತಿಳಿಯಲು ಓರ್ವಗಾಣಿಗರ ಗರ್ಭಿಣಿ ಸ್ತ್ರೀ ತಾನು ಬಲಿಯಾಗಲು ಸ್ವ-ಇಚ್ಛೆಯಿಂದ ಮುಂದೆ ಬಂದಳು. ಅವಳು ಹಿರಿಯರಿಗೆಲ್ಲಾ ನಮಸ್ಕರಿಸಿ, ಏಕನಾಥೇಶ್ವರಿಯನ್ನು ಧ್ಯಾನ ಮಾಡಿ ಕಂಭದ ಹತ್ತಿರ ಬಂದು ಅದಕ್ಕೂ ನಮಸ್ಕರಿಸಿ, ಆಹುತಿಯಾದಳು. ಎಷ್ಟು ಎತ್ತಿದರೂ ಅಲುಗಾಡದ ಕಂಭ. ಇವಳ ಆಹುತಿಯ ನಂತರ ಕಷ್ಟವಿಲ್ಲದೆ ತಕ್ಷಣ ಮೇಲೆ ಎದ್ದಿತು. ಈಗಲೂ ಆ ಕಂಬವನ್ನು ತೋರಿಸಿ ಈ ಕಥೆ ಹೇಳುತ್ತಾರೆ. ಇದು ಒಂದು ನಿದರ್ಶನ. ಇಂತಹ ಆತ್ಮಬಲಿದಾನಗಳು ಆಗಿನ ಕಾಲದಲ್ಲಿ ದೇವಸ್ಥಾನ ಕಟ್ಟುವಾಗ, ಕೆರೆ, ಬಾವಿಗಳನ್ನು ಕಟ್ಟುವಾಗ ಆಗುತ್ತಿದ್ದವು.

ಈ ಪದ್ಧತಿಯು ಪಾಳೆಯಗಾರರ ಕಾಲದಲ್ಲಿ ಬಹಳಷ್ಟು ನಡೆಯುತ್ತಿದ್ದವು. ಅದು ಗರ್ಭಿಣಿ ಸ್ತ್ರೀಯರ ಬಲಿದಾನವೇ ಆಗುತ್ತಿತ್ತು. ಈ ವಾಳಿಗಳು ನಮಗೆ ವೀರಗಲ್ಲು ಹಾಗೂ ಮಹಾಸತಿ ಕಲ್ಲುಗಳನ್ನು ನೋಡಿದಾಗ, ಕೆಲವು ಕಡೆ ಶಾಸನಗಳನ್ನು ಕೆತ್ತಿರುವುದು ಕಂಡುಬರುತ್ತದೆ. ಕೆಲವು ಕಡೆ ಬರಿದೆ ಶಿಲ್ಪಗಳು ಮಾತ್ರ ಕಂಡುಬರುತ್ತವೆ. ಇವುಗಳನ್ನು ಚಿತ್ರಗಳಲ್ಲಿ ಕಾಣಬಹುದು. ಪಾಳೆಯಗಾರರು ದೇವಸ್ಥಾನಗಳ ನಿರ್ಮಾಣ ಹಾಗೂ ತಟಾಕಗಳ ನಿರ್ಮಾಣಗಳಲ್ಲಿ ತಮ್ಮ ಔದಾರ್ಯವನ್ನು ಪ್ರಕಟಿಸಿದ್ದಾರೆ.

**ಸಾರ್ವಜನಿಕ ಚಟುವಟಿಕೆಗಳು**

ದೇವಸ್ಥಾನ, ಮಠ, ಅರವಟ್ಟಿಗೆ, ಸತ್ರಗಳು ಮುಂತಾದ ಸಾರ್ವಜನಿಕ ಚಟುವಟಿಕೆಗಳಂತೆ, ಸಂತೆ ಮತ್ತು ಪೇಟೆಗಳನ್ನು ವ್ಯವಸ್ಥೆಗೊಳಿಸುವುದು ಒಂದು ಪುಣ್ಯ ಕಾರ್ಯವೆಂದು ಅಂದಿನ ಸಮಾಜ ನಂಬಿದಂತಿತ್ತು. ಸಾರ್ವಜನಿಕರ ವ್ಯವಹಾರಕ್ಕೆ ಸಂತೆ, ಪೇಟೆಗಳು ಅಗತ್ಯವಾಗಿತ್ತು. ಅಂತೆಯೇ ಜರಿಮಲೆ ಪಾಳೆಯಗಾರರು ತಮ್ಮ ಆಳ್ವಿಕೆಯ ಪ್ರದೇಶಗಳಲ್ಲಿ ಅನೇಕ ಸಂತೆ ಪೇಟೆಗಳನ್ನು ವ್ಯವಸ್ಥೆಗೊಳಿಸಿರುವುದು ಕಂಡುಬರುತ್ತದೆ. ಪಾಳೆಯಗಾರರ ಕಾಲದಲ್ಲಿ ಅವರುಗಳು ಅನೇಕ ಪೇಟೆ, ಸಂತೆಗಳ ವ್ಯವಸ್ಥೆ ಮಾಡಿದುದರಿಂದ ಇವರ ರಾಜ್ಯದಲ್ಲಿ ವ್ಯಾಪಾರ ವರ್ಗಕ್ಕೆ ಸೇರಿದ ಬಣಜಿಗ, ಸೆಟ್ಟಿ, ಕೋಮಟಿಗ, ಮುಮ್ಮರಿದಂಡ, ನಖರ, ಗಾತ್ರಿಗ, ಜಿರಿಕೋಮಟಿಗ, ಅಕ್ಕಸಾಲಿ, ಗಾಣಿಗ, ಕುಂಬಾರ, ಚಮ್ಮಾರ ಮುಂತಾದವರು ಸಾಕಷ್ಟು ಸಂಖ್ಯೆಯಲ್ಲಿ ನೆಲೆಸಿದ್ದರು. ಕೆಲವು ಕಡೆ ಅಂಗಡಿಗಳಿರುವ, ಪೇಟೆಗಳಿರುವ ಮಾರ್ಗಗಳಿಗೆ ಅಂಗಡಿ ವೀಧಿ, ಪೇಟೆ ವೀಧಿ ಎಂದು ಕರೆಯುತ್ತಿದ್ದರು.

## ಮಲ್ಲಯುದ್ಧ

ಜನರ ಆಕರ್ಷಕವಾದ ಮತ್ತೊಂದು ಮುಖ್ಯವಾದ ಮನೋರಂಜನೆ ಎಂದರೆ ಮಲ್ಲಯುದ್ಧ. ಇದು ಶಕ್ತಿ ಸಾಹಸಗಳ ಪ್ರದರ್ಶನಕ್ಕೆ ಉತ್ತಮವಾದ ಅವಕಾಶವಾಗಿತ್ತು. ಮಲ್ಲ ಗುರುಗಳಿಗೆ, ಗರಡಿಮನೆ ಒಡೆಯರಿಗೆ ಸಮಾಜದಲ್ಲಿ ಬಹಳ ಮರ್ಯಾದೆ ಇತ್ತು. ಅರವತ್ನಾಲ್ಕು ಕಲೆಗಳಲ್ಲಿ, ವಿದ್ಯೆಗಳಲ್ಲಿ ಮಲ್ಲಯುದ್ಧವೂ ಒಂದಾಗಿತ್ತು. ಸಮಕಾಲೀನ ಸಾಹಿತ್ಯ ಕೃತಿಗಳು ಮಲ್ಲರು ಸಾಧನೆ ಮಾಡುತ್ತಿದ್ದ ಗರಡಿಮನೆ, ಮಲ್ಲಗಂಭ, ಅವರು ಸಾಧನೆ ಮಾಡುತ್ತಿದ್ದ ರೀತಿಗಳನ್ನು ವರ್ಣಿಸಿವೆ. ಗರಡಿಮಲ್ಲರ ವಂಶಸ್ಥರನ್ನು ಈ ಪ್ರದೇಶಗಳಲ್ಲಿ ಕಾಣಬಹುದು. ಕ್ರಿ.ಶ. ೧೬೭೭ನೆಯ ಕಾಲದ ಒಂದು ಶಾಸನದಲ್ಲಿ ತೆರಿಗೆ ರಹಿತ ಮಾಡಿಸಿಕೊಂಡ ಹಾಗೂ ದತ್ತಿ ಬಿಟ್ಟಿರುವುದನ್ನು ಉಲ್ಲೇಖಿಸುತ್ತದೆ.

## ವಿದ್ಯಾಭ್ಯಾಸ

ಮಧ್ಯಕಾಲೀನ ಕರ್ನಾಟಕದಲ್ಲಿ ದೇವಸ್ಥಾನಗಳು, ಮಠಗಳು, ವಿದ್ಯಾಕೇಂದ್ರದ ಪ್ರಮುಖ ಸ್ಥಾನಗಳಾಗಿದ್ದವು. ಜನರು ದೇವಸ್ಥಾನ, ಮಠಗಳಿಗೆ ದಾನ-ದತ್ತಿಗಳನ್ನು ಬಿಟ್ಟುಕೊಂಡಾಗ, ಅಗ್ರಹಾರವನ್ನು ನಿರ್ಮಿಸುವಾಗ ವಿದ್ಯಾಭ್ಯಾಸಕ್ಕೆ ಇಂತಿಷ್ಟು ಎಂದು ನಿಗಧಿ ಪಡಿಸುತ್ತಿದ್ದರು. ಶಾಸನಗಳಾಗಲಿ, ಸಾಹಿತ್ಯಗಳಾಗಲಿ ಆಗಿನ ವಿದ್ಯಾಭ್ಯಾಸದ ವಿವರಗಳನ್ನು ಕೊಡದ ಕಾರಣ, ಅದು ನಮ್ಮ ಊಹೆಗೆ ಬಿಟ್ಟಿದ್ದು ಪಾಳೆಯಗಾರರು ವಿದ್ಯಾಭ್ಯಾಸದ ಕ್ರಮವನ್ನು ವಿಜಯನಗರದವರ ಕ್ರಮವನ್ನೇ ಅನುಸರಿಸುತ್ತಿರಬೇಕು. ದೇವಸ್ಥಾನಗಳು, ಮಠಗಳು, ವಿದ್ಯಾಕೇಂದ್ರಗಳಾಗಿಯೂ ಸಮಾಜದ ನೈತಿಕಮಟ್ಟವನ್ನೂ ಉತ್ತಮಗೊಳಿಸುತ್ತಿದ್ದವು. ಇಂತಹ ಮಠಗಳು ಜರಿಮಲೆ ಪಾಳೆಯಗಾರರ ಕಾಲದಲ್ಲಿ ಸಾಕಷ್ಟಿದ್ದವು.

## ಸ್ತ್ರೀ ಶಿಕ್ಷಣ

ಹುಡುಗಿಯರಿಗೆ ಎಂಟರಿಂದ ಹನ್ನೆರಡು ವರ್ಷಗಳೊಳಗೆ ಮದುವೆ ಆಗುತ್ತಿದ್ದುದರಿಂದ ಅವರಿಗೆ ವಿದ್ಯಾಭ್ಯಾಸಕ್ಕೆ ಸಮಯವಿರುತ್ತಿರಲಿಲ್ಲ. ಆದರೂ ಇವರು ಅಲ್ಪಸ್ವಲ್ಪ ವೃತ್ತಿ ಶಿಕ್ಷಣವನ್ನು ಪಡೆದು ತಂದೆ, ಅನಂತರ ಪತಿಗೆ ಸಹಾಯ ಮಾಡುತ್ತಿದ್ದರು. ಪ್ರಭುವರ್ಗದ ಹೆಣ್ಣು ಮಕ್ಕಳು ತಕ್ಕಮಟ್ಟಿಗೆ ವಿದ್ಯಾವತಿಯಾರಾಗಿರುತ್ತಿದ್ದರು. ಇವರಿಗೆ ಸಂಗೀತ, ನರ್ತನ, ವೀಣೆ ನುಡಿಸುವಂತಹ ಕಲೆಗಳ ಅಭ್ಯಾಸಕ್ಕೆ ಮಹತ್ವ ಕೊಟ್ಟಿದ್ದರು. ಕೆಲವರು ಯುದ್ಧ ವಿದ್ಯೆಯಲ್ಲಿಯೂ ಪರಿಣಿತರಾಗಿದ್ದರು. ಹೀಗೆ ಪ್ರಭುವರ್ಗದ ಸ್ತ್ರೀಯರು ಯುದ್ಧ ವಿದ್ಯೆ, ಖಡ್ಗ ವಿದ್ಯೆ, ರಾಜ್ಯಾಡಳಿತ ವಿದ್ಯೆಯಲ್ಲಿ ಪ್ರವೀಣರಾಗಿ ತಮ್ಮದೇ ಆದ ಸ್ತ್ರೀ ಪಡೆಯನ್ನು ರಚಿಸಿಕೊಂಡು ಸಮರ್ಥ ರಾಣಿಯರೆನಿಸಿಕೊಂಡಿದ್ದರು. ದೇವದಾಸಿಯವರು, ಪಾತ್ರದವರು, ನೃತ್ಯ ಸಂಗೀತ, ಅಭಿನಯದ ಕಲೆಗಳಲ್ಲಿ ಪಾರಂಗತರಾಗಿದ್ದರು.

ಅಂದಿನ ಸಮಾಜದಲ್ಲಿ ಪ್ರಭುವರ್ಗದವರನ್ನು ಹೊರತುಪಡಿಸಿ ಬ್ರಾಹ್ಮಣರು ಮತ್ತು ಶೈವ ಗುರುಗಳು ಅಗ್ರಸ್ಥಾನದಲ್ಲಿದ್ದರು. ಷಟ್ಕರ್ಮದಲ್ಲಿ ನಿರತರಾಗಿದ್ದ ಮಹಾಜನಗಳ ಓಣಿಗಳು ವೇದ ಮಂತ್ರಗಳ ಶಬ್ದದಿಂದ ಹೋಮಾದಿಧೂಮದಿಂದ ಶೋಭಿಸುತ್ತಿದ್ದವು. ವಿವಿಧ ವೃತ್ತಿಗಳನ್ನಾಶ್ರಿಯಿಸಿದ

ಶ್ರಮಿಕ ವರ್ಗದ ಅಕ್ಕಸಾಲಿಗ, ಕಲ್ಲುಕುಟಿಗ ಕುಡಿವಕ್ಕಲ, ಗಾಣಿಗ, ಬಣಜಿಗ ಮುಂತಾದವು ಈ ಎಲ್ಲ ಜಾತಿಯವರು ತಮ್ಮ ತಮ್ಮ ಓಣಿಗಳಲ್ಲಿ ವಾಸಿಸುತ್ತಿದ್ದರು. ಸ್ತ್ರೀಯರಲ್ಲಿ ರಾಜವರ್ಗದವರು ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಪುರುಷನೊಂದಿಗೆ ಭಾಗವಹಿಸುತ್ತಿದ್ದರು. ನಾಯಕ ಅಥವಾ ಪಾಳೆಗಾರರೇ ಅರಸರಾಗಿದ್ದರಿಂದ ಆ ಜನಾಂಗಕ್ಕೆ ವಿಶೇಷ ಗೌರವವಿತ್ತು. ವೀರಶೈವದವರು ಉತ್ತಮ ಸ್ಥಾನಮಾನ ಹೊಂದಿದ್ದರು. ವೈಶ್ಯರು ವ್ಯಾಪಾರ ವಹಿವಾಟು ನಡೆಸುತ್ತಿದ್ದರು.

ಸಾಮಾನ್ಯವಾಗಿ ಅವಿಭಕ್ತ ಕುಟುಂಬ ಪದ್ಧತಿ ಅಸ್ತಿತ್ವದಲ್ಲಿತ್ತು. ಕುಟುಂಬದಲ್ಲಿ ಸ್ತ್ರೀ ಗೌರವ ಸ್ಥಾನಮಾನ ಹೊಂದಿದ್ದಳು. ವಿಶೇಷವಾಗಿ ಸ್ವಾತಂತ್ರ್ಯವಿತ್ತು. ನಾಯಕರ ಕಾಲದ ಉಡುಗೆ ತೊಡುಗೆಗಳ ಬಗ್ಗೆ ತಿಳಿಯಲು ಅವರ ಕಾಲದ ಲೌಕಿಕ ಶಿಲ್ಪಪಟ್ಟಿಕೆಗಳು, ಅರಸರ ಪ್ರತಿಮೆಗಳು ಸಹಾಯಕವಾಗಿವೆ. ಸಮಾಜದಲ್ಲಿ ಅವರವರ ಸ್ಥಾನಮಾನಕ್ಕೆ ತಕ್ಕಂತೆ ವೇಷಭೂಷಣಗಳು ಬೇರೆ ಬೇರೆಯಾಗಿದ್ದವು. ಪುರುಷರು ತಲಗೆ ಪೆಟ, ಬಗಲಕಿಸೆ ಅಂಗಿ ಮತ್ತು ಧೋತಿಯನ್ನು ಉಡುತ್ತಿದ್ದರು. ಅರಸರು ಕೂಡ ತಲೆಗೆ ಮುಂಡಾಸು, ಉದ್ಧವಾದ ನಿಲುವಂಗಿ ಧೋತಿಯನ್ನು ಧರಿಸಿ ಸೊಂಟಕ್ಕೆ ವಸ್ತ್ರ ಸುತ್ತಿಕೊಳ್ಳುತ್ತಿದ್ದರು. ಮತ್ತು ಕಿವಿಯಲ್ಲಿ ಪುಷ್ಪಕುಂಡಲ ಬೆರಳಿಗೆ ಉಂಗುರಗಳನ್ನು ಕೊರಳಲ್ಲಿ ಪದಕಹಾರ, ಮಣಿಸರ, ಕಾಲ್ಗಡಗಗಳನ್ನು ಧರಿಸುತ್ತಿದ್ದರು. ಸ್ತ್ರೀಯರು ಕುಬಸ ಮತ್ತು ಸೀರೆಯನ್ನು ಉಡುತ್ತಿದ್ದರು. ರಾಜಮಾತೆಗೆ ಮುಂಡಾಸು (ಪೇಟ)ವನ್ನು ಸುತ್ತಿಕೊಳ್ಳುತ್ತಿದ್ದರು. ರಾಣಿಯರು ಮತ್ತು ಇತರ ಸ್ತ್ರೀಯರು ತಮ್ಮ ಕೇಶವನ್ನು ಹಿಂದಕ್ಕೆ ಬಾಚಿ, ಬೈತಲೆ ತೆಗೆದು ವಿವಿಧ ಬಗೆಯ ತುರುಬುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಕೊರಳಲ್ಲಿ ವಿವಿಧ ಬಗೆಯ ಸರಗಳು ಕಿವಿಯೋಲೆ, ತೋಳ್ಬಂದಿ, ಸೊಂಟಪಟ್ಟಿ, ಪಾದರಸ, ಉಂಗುರ ಮುಂತಾದ ಆಭರಣಗಳನ್ನು ಅಲಂಕಾರಕ್ಕಾಗಿ ಬಳಸುತ್ತಿದ್ದರು.

### ಜರಿಮಲೆ ಪಾಳೆಯಗಾರರ ಧಾರ್ಮಿಕ ವ್ಯವಸ್ಥೆ

ಪ್ರಾಚೀನ ಕಾಲದಲ್ಲಿ ಕರ್ನಾಟಕವು ವೈದಿಕ ಸಂಸ್ಕೃತಿಗೆ ಒಳಗಾಗಿತ್ತು. ಇದರಿಂದ ಜಾತಿಗಳು ಹುಟ್ಟಿಕೊಂಡು ಶೋಷಣೆಗೆ ಒಳಗಾಗಲು ಬೌದ್ಧ, ಜೈನ ಧರ್ಮಗಳು ಹುಟ್ಟಿಕೊಂಡು ಬೆಳೆದವು. ಹನ್ನೆರಡನೆಯ ಶತಮಾನದ ಮಧ್ಯ ಭಾಗದ ಹೊತ್ತಿಗೆ ರಾಜಾಶ್ರಯವನ್ನು ಕಳೆದುಕೊಂಡಿದ್ದ ಜೈನ ಧರ್ಮವು ಜೈನೇತರರೊಂದಿಗೆ ಸಂಬಂಧ ಬೆಳೆಸಿದುದರಿಂದ ಅನೇಕ ಜೈನರು ಪರಮತವನ್ನು ಸ್ವೀಕರಿಸಿದರು. ಈ ಮತವೇ ವೀರಶೈವ ಮತ, ಜರಿಮಲೆ ಪಾಳೆಯಗಾರರು ಅನೇಕ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದ್ದಾರೆ. ಇವರುಗಳು ಅನೇಕ ಶೈವ, ವಿಷ್ಣುವಿನ ದೇವಾಲಯಗಳನ್ನು ಕಟ್ಟಿಸಿದ್ದಾರೆ. ಅಧಿಕಾರಿ ವರ್ಗದವರಿಗೆ, ಸಾರ್ವಜನಿಕರಿಗೆ ಪ್ರೋತ್ಸಾಹ ನೀಡುತ್ತಿದ್ದರು. ಹಲವಾರು ಉತ್ಸವಗಳು ಜಾತ್ರೆಗಳು ವಿಶೇಷವಾಗಿ ನಡೆಯುತ್ತಿದ್ದವು.

### ಶೈವ ಧರ್ಮ

ಶೈವ ಧರ್ಮವು ದಕ್ಷಿಣ ಭಾರತದಲ್ಲಿ ಇತಿಹಾಸ ಪೂರ್ವಕಾಲದಿಂದ ಪ್ರಚಾರದಲ್ಲಿತ್ತು.

ಕರ್ನಾಟಕದ ಶೈವ ಇತಿಹಾಸದಲ್ಲಿ ಕಾಪಾಲಿಕರ ಸಂಖ್ಯೆ ಕಡಿಮೆಯಿದ್ದು, ಕಾಳಾಮುಖ, ಪಾಶುಪತರ ಸಂಖ್ಯೆ ಸಾಕಷ್ಟಿದ್ದು ವೀರಶೈವರ ಪ್ರಭಾವ ಬಹಳವಾಗಿತ್ತು. ಕಾಳಮುಖ ಪಾಶುಪತರು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಬಳ್ಳಾರಿಯ ಕೆಲವು ಸ್ಥಳಗಳಲ್ಲಿ ಕಾಳಮುಖ ದೇವಸ್ಥಾನಗಳನ್ನು ಕಾಣಬಹುದು. ಶೈವ ದೇವಾಲಯಗಳ ಪೂಜಾ ಕಾರ್ಯಗಳಿಗೆ ನೈವೇದ್ಯ, ನಂದಾದೀಪ, ದೇವರ ಅಂಗಭೋಗ-ರಂಗಭೋಗ, ಜೀರ್ಣೋದ್ಧಾರ, ಅಗ್ರಹಾರಗಳಿಗೆ ಪಾಳೆಯಗಾರರು ದಾನದತ್ತಿಗಳನ್ನು ನೀಡಿರುವ ಸುಮಾರು ಶಾಸನಗಳು ಕರ್ನಾಟಕದಲ್ಲಿ ದೊರೆಯುತ್ತವೆ.

## ವೀರಶೈವ ಧರ್ಮ

ಕ್ರಿ.ಶ. ಹನ್ನೊಂದನೆಯ ಶತಮಾನದ ಮಧ್ಯ ಭಾಗದಿಂದ ಪಾಶುಪತ ಕಾಳಾಮುಖ ಚಟುವಟಿಕೆಗಳು ಇದರ ಒಂದು ಪಂಗಡ ಹೊಸ ರೂಪವನ್ನು ಪಡೆದು ವೀರಶೈವ ಧರ್ಮವಾಯಿತು. ಬಳ್ಳಾರಿ ಪಾಳೆಯಗಾರರು ಹಾಗೂ ಜರಿಮಲೆ ಪಾಳೆಯಗಾರರು ವೀರಶೈವ ಮತವನ್ನು ಅನುಸರಿಸುತ್ತಿದ್ದರೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ಅವರ ರಾಜ ಗುರುಗಳ, ಧರ್ಮಗುರುಗಳ ಹೆಸರುಗಳನ್ನು ಯಾವ ಕೈಫಿಯತ್ತುಗಳಲ್ಲೂ ಉಲ್ಲೇಖಿಸಿಲ್ಲ. ಆದರೆ ಶಾಸನಗಳನ್ನು ನೋಡಿದಾಗ ಅವರು ವೀರಶೈವರೆಂಬುದು ಸ್ಪಷ್ಟವಾಗುತ್ತದೆ. ಜರಿಮಲೆ ಪಾಳೆಯಗಾರರ ಗುರುವು ಮರಳುಸಿದ್ಧಸ್ವಾಮಿ ಭೂಮರಾಜನು ಅವರಿಗೆ ಮಠ, ದೇವಸ್ಥಾನ, ಬಾವಿಗಳನ್ನು ಕಟ್ಟಿಸಿದನು. ಇದರಿಂದ ಈ ಪಾಳೆಯಗಾರರ ವಂಶಸ್ಥರೂ ವೀರಶೈವರೆಂಬುದು ಗೊತ್ತಾಗುತ್ತದೆ. ಪ್ರಾಚೀನ ಶಾಸನ ಲೇಖನ ಸಂಗ್ರಹ, ಭಾಗ ಒಂದರಲ್ಲಿ ನಮಗೆ ಈ ಪಾಳೆಯ ಪಟ್ಟುಗಳಿಗೆ ಕಳುಹಿಸಿದ ನಿರೂಪ, ಆಶೀರ್ವಾದ, ಪಾಳೆಯಗಾರರು ಮಠಕ್ಕೆ ಕೊಟ್ಟ ದಾನಗಳ ಬಗೆಗೆ ತಿಳಿದುಬರುತ್ತದೆ. ಜರಿಮಲೆ ಪಾಳೆಯಗಾರರು ಶೃಂಗೇರಿ ಮಠಕ್ಕೂ ಹಾಗೂ ಶಿವಮೊಗ್ಗದ ವಾಯುವ್ಯದಲ್ಲಿ ಶ್ರೀ ಕೂಡಲಿ ಶೃಂಗೇರಿ ಮಠದ ಅಮ್ಮಾಜಿ ಸ್ವಾಮಿಗಳ ಜೊತೆಗೆ ಸಂಬಂಧ ಇಟ್ಟುಕೊಂಡಿದ್ದರು. ಶೃಂಗೇರಿ ಮಠದ ಶ್ರೀ ಶಂಕರ ಭಾರತೀ ಸ್ವಾಮಿಗಳು ಜರಿಮಲೆ ಪಾಳೆಯಗಾರರುಗಳಿಗೆ ಆಶೀರ್ವದಿಸಿ ಉಡುಗೊರೆಗಳ ಸಹಿತ ಸಂದೇಶವನ್ನು ಕಳುಹಿಸುತ್ತಿದ್ದರು. ಗ್ರಾಮದ ಮುಖ್ಯಸ್ಥರು ತಮ್ಮ ಗ್ರಾಮಗಳಲ್ಲಿಯ ಧಾರ್ಮಿಕ ಸಂಘಗಳ ಕಡೆಗೆ ಲಕ್ಷ್ಯವಿಟ್ಟು ಅವುಗಳನ್ನು ಉಳಿಸಿಕೊಳ್ಳುವ ಕಡೆಗೆ ಗಮನ ಕೊಡುತ್ತಿದ್ದರು. ಅಂತೆಯೇ ಇಷ್ಟು ವರ್ಷಗಳು ಕಳೆದರೂ ಕೆಲವು ದೇವಾಲಯಗಳು ಭದ್ರವಾಗಿವೆ.

ಪಾಳೆಯಗಾರರಲ್ಲದೆ ಸೈನಿಕರು, ಮಹಾಜನರು, ರಾಣಿಯರು, ಗ್ರಾಮದ ಪ್ರಮುಖರು ಮುಂತಾದವರು ಕೂಡ ದೇವಸ್ಥಾನ, ಮಠ, ಬಸದಿ, ಅಗ್ರಹಾರಗಳ ರಕ್ಷಣೆಯ ಹೊಣೆಯನ್ನು ಹೊತ್ತಿದ್ದರು. ಇವರ ಕಾಲದಲ್ಲಿ ಧಾರ್ಮಿಕ ತತ್ವಗಳ ದೃಷ್ಟಿಯು ಅವರ ರಾಜ್ಯಾಡಳಿತದಲ್ಲಾದ ಬದಲಾವಣೆ ಅದರ ಪ್ರತಿಕ್ರಿಯೆಗಳಿಗೆ ಪ್ರಬಲವಾದ ಸಾಕ್ಷಿಯಾಗಿದೆ. ಏಕೆಂದರೆ ಧಾರ್ಮಿಕ ಸಹಿಷ್ಣುತೆಯಿಂದ ಎಲ್ಲಾ ಮತಗಳ ಜನರ ಸುಖ, ಸಮೃದ್ಧಿ ಏಳಿಗೆಗೆ ಕಾರಣವಾಗುತ್ತದೆ. ಹೀಗೆ ಜರಿಮಲೆ ಪಾಳೆಯಗಾರರು ಎಲ್ಲ ಧರ್ಮಗಳಿಗೂ ಪ್ರೋತ್ಸಾಹ ಕೊಡುತ್ತಿದ್ದರು. ಧರ್ಮಗಳ ಬಗ್ಗೆ

ಅವರಲ್ಲಿ ಯಾವ ಪಕ್ಷಪಾತವೂ ಇರಲಿಲ್ಲ. ಆದ್ದರಿಂದ ಅವರ ಆಡಳಿತದಲ್ಲಿ ಜನರು ಬೇರೆ ಬೇರೆ ಧರ್ಮಗಳನ್ನು ನಿರ್ಭೀತಿಯಿಂದ ಅನುಸರಿಸುತ್ತಿದ್ದರು. ಅದರಂತೆ ಒಂದೊಂದು ಕಾಲದಲ್ಲಿ ಬೇರೆ ಬೇರೆ ಧರ್ಮಗಳು ಏಳಿಗೆಯನ್ನು ಪಡೆದಿವೆ.

ರಾಜ್ಯದ ರಕ್ಷಣೆಯ ದೃಷ್ಟಿಯಿಂದ ಕೋಟೆ, ಬುರಜಗಳನ್ನು ಕಟ್ಟಿಸಿದರು. ಇವರ ಗುರುಗಳಾದ ಶ್ರೀ ಚನ್ನಬಸವ ಸ್ವಾಮಿಗಳಿಗೆ ಮಠ ಕಟ್ಟಿಸಿ ಅವರ ಪಟ್ಟಾಭಿಷೇಕಕ್ಕೆ ಹರಪನಹಳ್ಳಿ ಹಾಗೂ ಚಿತ್ರದುರ್ಗದವರಲ್ಲದೆ, ಇತರರನ್ನೂ ಕರೆಯಿಸಿ, ವೈಭವದಿಂದ ಮಾಡಿದರು. ಭೂಮರಾಜನು ಗುಡಿಕೋಟೆ, ಸಂಡೂರು, ವಡ್ಡು, ದರೋಜಿ, ಬಾಣರಾವಿ, ತುಡುತುಶಿ, ತೋಳಗಲ್ಲು, ಬಳ್ಳಾರಿ ಮುಂತಾದವುಗಳನ್ನು ಗೆದ್ದುಕೊಂಡನು. ದುರ್ಗಾದೇವಿಯ ದೇವಸ್ಥಾನ ಕಟ್ಟಿಸಿ ಕಾಶಿಯಿಂದ ಬ್ರಾಹ್ಮಣರನ್ನು ಕರೆಯಿಸಿದರು. ಉಗ್ರಾಣಿಕರು ಮತ್ತು ಗುಡಿ ನಾಯಕರನ್ನು ನೇಮಿಸಿ, ಮೂವರನ್ನು ದೇವಸ್ಥಾನದ ಮುಖ್ಯಸ್ಥರನ್ನಾಗಿ ಮಾಡಿದರು. ರಾಜ್ಯದ ಕೆಲಸಗಳು ಸುಸೂತ್ರವಾಗಿ ನಡೆಯುವಂತೆ ಹನ್ನೆರಡು ಮಂದಿ ಆಯಾಗಾರರನ್ನು ನೇಮಿಸಿದರು.

**ಮಠಗಳು**

ದೇವಸ್ಥಾನಗಳಿಗಿದ್ದಷ್ಟೇ ಮಹತ್ವ ಮಠಗಳಿಗೆ ಆಗಿನ ಕಾಲದಲ್ಲಿದ್ದಿತು. ಈ ಮಠಗಳಲ್ಲಿ ಅನ್ನದಾನ ವಿದ್ಯಾದಾನಗಳೆರಡೂ ನಡೆಯುತ್ತಿದ್ದವು. ಕೆಲವೊಮ್ಮೆ ಮಠದ ಅಧಿಪತಿಗಳೊಡನೆ ರಾಜನು ರಾಜಕೀಯವನ್ನು ಚರ್ಚೆಯನ್ನು ಮಾಡಲು ಬರುತ್ತಿದ್ದನು. ದೇವಾಲಯಗಳಂತೆ ಮಠಗಳಿಗೂ ದಾನದತ್ತಿಗಳನ್ನು ಜರಿಮಲೆ ಪಾಳೆಯಗಾರರು ನೀಡುತ್ತಿದ್ದರು. ವಿವಿಧ ಹೆಸರಿನ ವೀರಶೈವ ಮಠಗಳೂ, ವ್ಯಾಸ, ರಾಘವೇಂದ್ರಸ್ವಾಮಿ, ಶ್ರೀ ವೈಷ್ಣವ ಮಠಗಳು ಈ ಪ್ರದೇಶಗಳಲ್ಲಿ ಇದ್ದು, ಧರ್ಮದ ಪ್ರಚಾರಕ್ಕಾಗಿಯಷ್ಟೇ ಅಲ್ಲದೆ, ವಿದ್ಯಾಕೇಂದ್ರಗಳೂ ಆಗಿದ್ದವು ಎಂದು ಹೇಳಲು ಅಡ್ಡಿಯಿಲ್ಲ. ಇವುಗಳಿಗೆ ದಾನದತ್ತಿಯನ್ನು ಜನ ಕೊಡುತ್ತಿದ್ದರು.

**ಉಜ್ಜಯಿನಿ ಮಠದ ಬಾಂಧವ್ಯ**

ಉಜ್ಜಯಿನಿಯು ಜರಿಮಲೆಯವರ ವಶಕ್ಕೆ ಇದ್ದುದನ್ನು ಕ್ರಿ.ಶ. ೧೭೪೨ರಲ್ಲಿ ಹರಪನಹಳ್ಳಿಯ ಸೋಮಶೇಖರ ನಾಯಕನು ಉಜ್ಜಯಿನಿಯನ್ನು ತನ್ನ ಅಧೀನಕ್ಕೆ ತೆಗೆದುಕೊಂಡನು. ಆದರೆ ಜರಿಮಲೆಯವರು ಇಂದಿಗೂ ಪ್ರತಿವರ್ಷವೂ ರಥೋತ್ಸವದ ನಂತರ ಶಿಖರಕ್ಕೆ ಮಾಡುವ ತೈಲಾಭಿಷೇಕವು ಇವರಿಂದಲೇ ಪ್ರಾರಂಭಗೊಳ್ಳುವ ಪದ್ಧತಿ ಇದೆ. ಈಗಲೂ ಈ ಪಾಳೆಯಗಾರರ ಸಂತತಿಯವರು ಉಜ್ಜಯಿನಿಗೆ ಸ್ವತಃ ಹೋಗದೆ ತಮ್ಮ ಪ್ರತಿನಿಧಿಯ ಮೂಲಕ ಎಣ್ಣೆಯನ್ನು ಕಳುಹಿಸುತ್ತಾರೆ. ಹಾಗೆಯೇ ಈ ಮಠದ ಪಟ್ಟಾಧ್ಯಕ್ಷರಿಗೆ ಪಾದ ಕಾಣಿಕೆಯನ್ನು ಸಲ್ಲಿಸಲಾಗುತ್ತದೆ. ಇವರು ಕಳುಹಿಸಿದ ತೈಲ ಕುಂಬವು ಬರುವತನಕ ಬೇರೆಯವರ ಎಣ್ಣೆಯನ್ನು ಶಿಖರಕ್ಕೆ ಎರೆಯುವುದಿಲ್ಲ. ಇದು ಉಜ್ಜಯಿನಿ ಸಂಸ್ಥಾನ ಮತ್ತು ಜರಿಮಲೆ ಪಾಳೆಯಗಾರರ ನಡುವೆ ಇದ್ದ ಬಾಂಧವ್ಯಕ್ಕೆ ಪ್ರಬಲ ಸಾಕ್ಷಿ (ಶ್ರೀ ಜಗದ್ಗುರು ಉಜ್ಜಯಿನಿ ಸದ್ಧರ್ಮ ಸಿಂಹಾಸನ ಮಹಾ

ಸಂಸ್ಥಾನ ಮಠ, ಉಜ್ಜಯಿನಿ ಪತ್ರದ ಕ್ರಸಂ. ೨೭೪, ದಿನಾಂಕ ೨೨.೪.೮೮). ಈ ಪಾಳೆಯಗಾರರಿಗೆ ಬೆಂಬಲವಾಗಿ ನಿಂತ ಮಳೆ ಬಗೆ ಚನ್ನಬಸಪ್ಪ ಸ್ವಾಮಿಗಳ ಗದ್ದಿಗೆಯ ಉಜ್ಜಯಿನಿಯ ದಕ್ಷಿಣ ದಿಕ್ಕಿನಲ್ಲಿದೆ. ಇದನ್ನು ಮಳೆ ಸ್ವಾಮಿಗಳ ಗದ್ದಿಗೆ ಎನ್ನುವರು.

ರಾಜ್ಯದಲ್ಲಿ ಹಿಂದೂ ಧರ್ಮೀಯರೇ ಬಹುಸಂಖ್ಯೆಯಲ್ಲಿದ್ದರು. ವೈಷ್ಣವ, ಶೈವ, ಮತೀಯರು ಪ್ರಧಾನವಾಗಿದ್ದರು. ವೈಷ್ಣವ ಮತವು ತುಂಬಾ ಜನಪ್ರಿಯವಾಗಿತ್ತು. ಅರಸರು ಸ್ವತಃ ವಿಷ್ಣುವಿನ ಪರಮಭಕ್ತರಾಗಿದ್ದರು. ಪ್ರಾಯಶಃ ಇದೇ ಸಂದರ್ಭದಲ್ಲಿ ವಿಜಯನಗರದ ತುಳು ವಂಶದವರು ವಿಶೇಷವಾಗಿ ವೈಷ್ಣವ ಧರ್ಮವನ್ನು ಅನುಸರಿಸಿ ಪ್ರೋತ್ಸಾಹ ನೀಡಿದ್ದು ನಾಯಕರ ಮೇಲೂ ಪ್ರಭಾವ ಬೀರಿರಬೇಕು. ಇದರಿಂದ ನಾಯಕರು ವಿಷ್ಣುವಿನ ಶ್ರೇಷ್ಠ ಭಕ್ತರಾಗಿದ್ದರೆಂದು ತಿಳಿಯುತ್ತದೆ. ಶೈವರು, ವೀರಶೈವರು ಅಧಿಕ ಸಂಖ್ಯೆಯಲ್ಲಿದ್ದರು. ಅರಸರು ವೈಷ್ಣವ ಮತಾನುಯಾಯಿಗಳಾಗಿದ್ದರು ಕೂಡ ಶೈವ ಮತವನ್ನು ಸಮಾನ ದೃಷ್ಟಿಯಿಂದ ಕಾಣುತ್ತಿದ್ದರು. ವಿಷ್ಣು, ಶಿವನ ಆರಾಧನೆಯ ಜೊತೆಗೆ ಆಂಜನೇಯ ಮತ್ತು ಶಕ್ತಿ ದೇವತೆಗಳ ಆರಾಧನೆಯು ಜನಪ್ರಿಯವಾಗಿತ್ತೆಂದು ತೋರುತ್ತದೆ. ರಾಜ್ಯದಲ್ಲಿ ಹಲವಾರು ಶಕ್ತಿಯ ಪ್ರತೀಕವಾಗಿ ಶಕ್ತಿದೇವತೆಯನ್ನು, ದುರ್ಗಾಂಭಿಕೆಯನ್ನು ಮುಂತಾದ ಹೆಣ್ಣು ದೇವತೆಗಳನ್ನು ಪಾಳೆಯಗಾರರು ಪೂಜಿಸುತ್ತಿದ್ದರು. ಲಕ್ಷ್ಮೀ, ಗಜಲಕ್ಷ್ಮೀ, ಮಹಿಷಾಸುರ ಮರ್ದಿನಿ, ರೇಣುಕಾ ಎಲ್ಲಮ್ಮ, ದುರ್ಗೆ, ಕಾಳಿಕಾದೇವಿ ಮುಂತಾದ ಅನೇಕ ಶಕ್ತಿ ದೇವತೆಯ ದೇವಾಲಯಗಳಿವೆ. ಅರಸರು ಸಾಧು–ಸಂತರಲ್ಲಿ ಭಕ್ತಿಯನ್ನು ಹೊಂದಿದ್ದರು.

ಧರ್ಮವನ್ನು ರಕ್ಷಿಸಿ ಪ್ರಜೆಗಳಲ್ಲಿ ಧಾರ್ಮಿಕ ಜೀವನ ಉತ್ಪತ್ತಿಯಾಗುವಂತೆ ಮಾಡಿ ಧರ್ಮ ರಾಜ್ಯವನ್ನು ಸ್ಥಾಪಿಸಬೇಕು. ಧರ್ಮದ ಪ್ರಚಾರವಾಗುವಂತೆ ದೇವಸ್ಥಾನ, ಮಠಗಳನ್ನು ಕಟ್ಟಿಸಬೇಕು, ಕಟ್ಟುವಂತೆ ಪ್ರಜೆಗಳಿಗೆ ಪ್ರಚೋದಿಸಬೇಕು. ರಾಜಕೋಶವನ್ನು ನ್ಯಾಯವಾಗಿ, ಪ್ರಜೆಗಳಿಗೆ ಭಾರವಾಗದಂತೆ ತುಂಬಬೇಕು. ಉದಾರವಾಗಿ ದಾನಗಳನ್ನು ಮಾಡುವುದು, ಜನಪ್ರಿಯವಾದ ಲೋಕೋಪಕಾರ ಕಾರ್ಯಗಳನ್ನು ಮಾಡಿ ಪ್ರಜೆಗಳ ಸುಖ– ಸಂತೋಷಗಳನ್ನು ಲಕ್ಷದಲ್ಲಿಡುವುದು ರಾಜನ ಧಾರ್ಮಿಕವಾದ ಕರ್ತವ್ಯಗಳಾಗಿದ್ದವು. ಸಮಾಜದಲ್ಲಿಯ ಬಡವರು, ಅದೃಷ್ಟಹೀನರು, ಅನಾಥರು, ಇವರುಗಳ ಉದ್ಧಾರಕ್ಕಾಗಿ ಸಂಘ–ಸಂಸ್ಥೆಗಳನ್ನು ಸ್ಥಾಪಿಸಬೇಕು. ಹಾಗೂ ಜನರ ಹಿತಕ್ಕಾಗಿ ಧಾರ್ಮಿಕ ಸಮಾರಂಭಗಳನ್ನು, ಧರ್ಮಶಾಸ್ತ್ರಗಳ ಅನುಸಾರವಾಗಿ ಜರಿಮಲೆ ಪಾಳೆಯಗಾರರು, ಆಡಳಿತ ನಡೆಸುತ್ತಿದ್ದರು. ಧಾರ್ಮಿಕ ನೀತಿಗಳ ಅನ್ವಯ ರಾಜ್ಯಭಾರ ಮಾಡುತ್ತಿದ್ದರು.

ಧರ್ಮದ ರಕ್ಷಣೆಗಾಗಿ ದೇವಸ್ಥಾನಗಳನ್ನು ಮಠಗಳನ್ನು ಕಟ್ಟಿಸಲು, ಕಟ್ಟಲು ಪ್ರಚಾರ ಮಾಡುವುದು ರಾಜನ ಕರ್ತವ್ಯಗಳಲ್ಲಿ ಒಂದು ಎಂದು ಹೇಳಿದೆಯಷ್ಟೇ. ಜರಿಮಲೆ ಪಾಳೆಯಗಾರರು ಸಮಾಜದಲ್ಲಿ ಸಮಾನ ಧರ್ಮಿಗಳಾಗಿದ್ದರು. ತಮ್ಮ ರಾಜ್ಯದಲ್ಲಿ ಪ್ರತಿಯೊಂದು ಧರ್ಮ, ಮತ ಮತ್ತು ಪಂಥಗಳನ್ನು ಸಮಾನತೆಯಿಂದ ಕಾಣುತ್ತಿದ್ದರು. ಹಾಗೂ ಪ್ರತಿಯೊಂದರಲ್ಲೂ ಶ್ರದ್ಧೆ,

ಭಕ್ತಿಯನ್ನಿಟ್ಟಿದ್ದರು. ನಾಯಕರುಗಳಿಗೆ ದೈವೀಶಕ್ತಿಯಲ್ಲಿ ಆಳವಾದ ನಂಬುಗೆ ಹಾಗೂ ಧರ್ಮದ ಸಂಬಂಧದಲ್ಲಿ ಉದಾರತೆ ಇತ್ತು. ತಮ್ಮ ರಾಜ್ಯದ ಬೇರೆ ಬೇರೆ ಧರ್ಮಗಳಿಗೂ ಮತ್ತು ಪಂಥಗಳಿಗೂ ಉದಾರವಾಗಿ ಭೂಮಿ, ಹಳ್ಳಿ, ಅಗ್ರಹಾರಗಳನ್ನು ದಾನವಾಗಿ ಕೊಡುತ್ತಿದ್ದರು. ನಾಯಕರ ಉದಾರತೆ, ಧರ್ಮ ಸಹಿಷ್ಣುತೆ ಹಾಗೂ ಸಹಾಯದಿಂದ ಬೇರೆ ಬೇರೆ ಪಂಥದವರು ತಮ್ಮ ದೇವರಿಗಾಗಿ ದೇವಾಲಯಗಳನ್ನು ಕಟ್ಟಿಕೊಂಡಿದ್ದಲ್ಲದೆ, ಹಬ್ಬ ಹರಿದಿನಗಳನ್ನು, ಜಾತ್ರೆಗಳನ್ನು ಆಚರಿಸುತ್ತಿದ್ದರು. ಜರಿಮಲೆ ಪಾಳೆಯಗಾರರು ಹರಿಹರರಲ್ಲಿ ಭೇದ ಕಾಣುತ್ತಿರಲಿಲ್ಲ. ಈ ಪಾಳೆಯಗಾರರು ಬ್ರಾಹ್ಮಣರಿಗೆ, ಸಮಾಜದ ಉನ್ನತ ವರ್ಗದವರಿಗೆ ಧರ್ಮಕಾರ್ಯಗಳನ್ನು ಮಾಡಲು ಅನುಕೂಲವಾಗಿ ಜನರಲ್ಲಿ ಧಾರ್ಮಿಕ ಭಾವ ಬೆಳೆಯಲೆಂದು ಅಗ್ರಹಾರಗಳನ್ನು ದಾನವಾಗಿ ಕೊಡುತ್ತಿದ್ದರು. ಆದಾಯ ಸಹಿತವಾಗಿ ಯಾವ ರೀತಿಯ ತೆರಿಗೆಯೂ ಇಲ್ಲದಂತೆ ಭೂಮಿ, ಹಳ್ಳಿಗಳನ್ನು ಯಾವ ತೊಂದರೆಯೂ ಇಲ್ಲದಂತೆ ಧರ್ಮ ಕಾರ್ಯಗಳನ್ನು ನಡೆಸಿಕೊಂಡು ಹೋಗಲು ಬ್ರಾಹ್ಮಣರಿಗೆ ಬಿಟ್ಟುಕೊಡುತ್ತಿದ್ದರು. ದಾನ ಕೊಟ್ಟ ಭೂಮಿ ಹಳ್ಳಿ ಅಗ್ರಹಾರಗಳಿಂದ ಬರುವ ಆದಾಯ ತೆರಿಗೆಗಳನ್ನು ವಸೂಲು ಮಾಡಿಕೊಂಡು ಅನುಭವಿಸಬಹುದಿತ್ತು. ಜರಿಮಲೆ ಪಾಳೆಯಗಾರರು ಹಲವಾರು ದಾನಗಳನ್ನು ಮಾಡುತ್ತಿದ್ದರು. ಅಂದರೆ ದೇವಸ್ಥಾನದ ಪೂಜೆ, ನಂದಾದೀಪ, ಹೂವಿನ ಸೇವೆ ಮುಂತಾದ ಪೂಜಾಕಾರ್ಯಗಳಿಗೆ ವಿಘ್ನಬಾರದಂತೆ ದಾನಗಳನ್ನು ಮಾಡಿದನು. ಜರಿಮಲೆ ಪಾಳೆಯಗಾರರು ಪಂಡಿತರುಗಳಿಗೆ, ಮಠಗಳಿಗೆ ಭೂದಾನವನ್ನು ಕೊಡುತ್ತಿದ್ದರು. ಅಕ್ಕಸಾಲಿಗನಿಗೆ, ವಡ್ಡರಿಗೆ, ಸೈನಿಕರು, ಯುದ್ಧದಲ್ಲಿ ಮಡಿದವರಿಗೆ, ಕೆರೆ ಬಾವಿಗಳನ್ನು ಜೀರ್ಣೋದ್ಧಾರ ಮಾಡಿದವರಿಗೆ, ಪಂಡಿತರಿಗೆ ಬಂಗಾರ, ಭೂಮಿ, ಹಳ್ಳಿ, ಅಗ್ರಹಾರ ಮುಂತಾದವುಗಳನ್ನು ದಾನ ನೀಡುತ್ತಿದ್ದರು.

### ಡಿ. ನ್ಯಾಯಾಡಳಿತ

ಮನುಷ್ಯರ ಸಂಬಂಧಗಳು, ಕೌಟುಂಬಿಕ ಪದ್ಧತಿ ಮತ್ತು ಗ್ರಾಮಾಂತರ ಪ್ರದೇಶಗಳು ಸೌಹಾರ್ದೇಯುತವಾಗಿರಲೆಂದು, ಶಾಂತಿಯುತವಾಗಿರಲೆಂದು ಜನಪದರು ನ್ಯಾಯಪದ್ಧತಿಯನ್ನು ಚಲಾವಣೆಗೆ ತಂದರು. ಪ್ರಾಚೀನ ಕಾಲದಲ್ಲಿ ರಾಜ ಇಲ್ಲವೇ ಸಂಸ್ಥಾನಿಕರು ಪರವಾಗಿ ಗೌಡ ಅಥವಾ ಪಟೇಲನಾದವನು ಊರಿನ ಉಸಾಬರಿಯನ್ನು ನೋಡಿಕೊಳ್ಳುತ್ತಿದ್ದ. ರಾಜಕೀಯ ಕಟ್ಟುಪಾಡುಗಳಿಗಿಂತ ಸಾಮಾಜಿಕ ಕಟ್ಟುಪಾಡುಗಳೇ ಗ್ರಾಮೀಣ ಪ್ರದೇಶಗಳಿಗೆ ಮುಖ್ಯವಾದವು. ತೀರಾ ಹತ್ತಿರವೂ ಆದವು. ಕಟ್ಟುಪಾಡುಗಳನ್ನು ರೂಪಿಸುವವರು ಊರ ಪ್ರಮುಖರಾದುದರಿಂದ ಅವರ ಬಗೆಗೆ ಗೌರವವೂ ಹೆಚ್ಚಾಯಿತು. ದೈವದ ಸಮಾನತೆಯನ್ನು ಪಡೆದರು. ಅಂದಿನಿಂದ ನ್ಯಾಯತೀರ್ಮಾನದಲ್ಲಿ ಪಂಚರ ಕಲ್ಪನೆಯೂ ರೂಢಿಗೆ ಬಂದಿತು. ಪಂಚರ ನ್ಯಾಯತೀರ್ಮಾನದ ರೀತಿಗಳು ಸೊಗಸಾಗಿದ್ದವು.

ಬೇಟೆಗಾರರ ಗುಂಪೊಂದು ಕಾಡಿನಲ್ಲಿ ಬೇಟೆಯಾಡುತ್ತಿರುವಾಗ ಜಿಂಕೆಯೊಂದನ್ನು ಕಂಡು ಹೊಡೆಯುತ್ತಾರೆ. ಗಾಯಗೊಂಡು ಜಿಂಕೆ ಜೀವಭಯದಿಂದ ಓಡಿ ಹೋಗಿ ರೈತನೊಬ್ಬನ

ಹೊಲದಲ್ಲಿ ಬಿದ್ದು ಬಿಡುತ್ತದೆ. ಹೊಲದ ರೈತ ನನ್ನ ಜಿಂಕೆ, ನಾನು ಸಾಕಿದ್ದು ನನ್ನ ಹೊಲದಲ್ಲಿ ಬಿದ್ದಿದೆ. ಆದ್ದರಿಂದ ಇದು ನನ್ನದು ಎಂದ. ಬೇಟೆಗಾರರ ಗುಂಪು ನಾವು ಬೇಟೆಯಾಡಿದ್ದು, ಅದು ಕಾಡಿನ ಜಿಂಕೆ. ಆದ್ದರಿಂದ ಅದು ನಮಗೆ ಸೇರಬೇಕಾದುದು ಎಂದಿತು. ವಾದಕ್ಕೆ ವಾದ ಬೆಳೆದು ನ್ಯಾಯಕ್ಕಾಗಿ ಎರಡು ಬಣದವರು ಊರ ಮುಖ್ಯಸ್ಥರ ಮುಂದೆ ಹಾಜರಾದರು. ಇವರ ವಾದವನ್ನು ಆಲಿಸಿದ ಮುಖ್ಯಸ್ಥರು ಮೊದಲು ರೈತನನ್ನು ವಿಚಾರಿಸಿದರು. ಜಿಂಕೆ ನನ್ನದು ಎನ್ನುವೆಯಲ್ಲ ಅದು ಹೆಣ್ಣೋ ಗಂಡೋ ಎಂಬುದನ್ನು ಮೊದಲು ಹೇಳು ಎಂದರು. ಆತ ತಕ್ಷಣ ಉತ್ತರಿಸಲಾಗಲಿಲ್ಲ. ಆಗ ಮುಖ್ಯಸ್ಥರು 'ಇದು ಸಾಕಿದ ಜಿಂಕೆಯಲ್ಲ ಕಾಡಿನ ಜಿಂಕೆ' ಎಂದು ಭಾವಿಸಿ ಇದು ಸೇರಬೇಕಾದದ್ದು ಬೇಟೆಗಾರರ ಗುಂಪಿಗೆ ಎಂದು ತೀರ್ಪನ್ನು ಕೊಟ್ಟರು. ಹಳ್ಳಿಯ ಜಗಳಗಳಿಗೆಲ್ಲ ಅಲ್ಲಿಯ ಹಿರಿಯರೇ ತೀರ್ಪುಗಾರರು. ಹಳ್ಳಿಗಳಿಂದ ಕೂಡಿರುವ ಭಾರತದ ದೇಶಾದ್ಯಂತ ಈ ಪದ್ಧತಿ ಚಾಲ್ತಿ ಇತ್ತು. ಇಂಥ ನ್ಯಾಯ ವಿತರಣಾ ಪದ್ಧತಿಯಲ್ಲಿ ಆಡಳಿತವರ್ಗ ಹಸ್ತಕ್ಷೇಪ ಮಾಡದಿರುವುದರಿಂದ ಬಹಳ ಕಾಲ ಮುಂದುವರಿಯಿತು. ನ್ಯಾಯ ನೀಡುವವರು ಬುದ್ಧಿವಂತರು. ಜಗಳವನ್ನು ಬಗೆಹರಿಸುವಲ್ಲಿ ಚತುರತೆಯನ್ನು ತೋರುತ್ತಾರೆ. ಅವರ ಇಂಥ ಜಾಣ್ಮೆಯ ಬಗೆಗೆ ಜನಪದ ಲಾವಣಿಯಲ್ಲಿ ಉದಾಹರಣೆಗಳಿವೆ. ಕೋಟು, ಕಚೇರಿಗಳು ಸ್ಥಾಪನೆಯಾಗುವ ಮುನ್ನ ಆಯಾ ಊರುಗಳ ಮಧ್ಯ ಇರುವ ಚಾವಡಿ ಕಟ್ಟೆಗಳ ಮೇಲೆ ಜರಿಮಲೆ ಪಾಳೆಯಗಾರರು ನ್ಯಾಯ ತೀರ್ಮಾನಿಸುವ ಪರಿಪಾಠವಿತ್ತು. ಕೋಟಿನ ಮೆಟ್ಟಿಲು ಹತ್ತುವುದು ಅವಮಾನವೆಂದು ಭಾವಿಸಿರುವ ಸಮುದಾಯಗಳಲ್ಲಿ ಚಾವಡಿಕಟ್ಟೆಗಳಿಗೆ ಈಗಲೂ ವಿರಾಮವಿಲ್ಲ. ಇಂಥ ಕಡೆಗಳಲ್ಲಿ ತಪ್ಪಿತಸ್ಥರಾದವರನ್ನು ಎಳೆದು ತಂದು ಕಟ್ಟೆಮನೆ, ಗುರುಮನೆ, ಅರಮನೆಗಳಿಗೆ ತಲೆಬಾಗುವೆಯೋ ಇಲ್ಲವೋ ಎಂದು ಕೇಳುತ್ತಿದ್ದರು. ಅಪರಾಧಿ ಅದಕ್ಕೆ ಮರುಮಾತಾಡದೇ ಅವರು ವಿಧಿಸಿದ ದಂಡವನ್ನು ಕಟ್ಟಿಕೊಟ್ಟರೆ ಕೂಡಲೇ ಆಪಾದನೆಯ ಹೊರೆಯಿಂದ ಮುಕ್ತನನ್ನಾಗಿ ಮಾಡುತ್ತಿದ್ದರು. ನ್ಯಾಯವಾದಿಗಳ ಬಲವಂತವಿಲ್ಲದೆ ಯಾರು ತಮ್ಮ ತಪ್ಪನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾರೋ ಅಂಥವರು ವಿಶೇಷ ರಿಯಾಯಿತಿಗಳನ್ನು ಪಡೆಯುತ್ತಿದ್ದರು. ನ್ಯಾಯಸ್ಥರು ಬಲವಂತಪಡಿಸಿದಾಗಲೂ ತಾನು ನಿರಪರಾಧಿ ಎಂತಲೇ ವಾದಿಸುತ್ತಿದ್ದರೆ ಈತ ಊರಿನ ಪಂಚಾಯಿತಿಯನ್ನು ಮೀರಿದ್ದಾನೆ. ಈ ಊರಲ್ಲಿ ಇವನಿಗೆ ಬೆಂಕಿ, ನೀರನ್ನು ಯಾರು ಕೊಡಕೂಡದು, ಯಾರಾದರೂ ಕೊಟ್ಟರೆ ಅವನಿಗೆ ವಿಧಿಸಬೇಕಾಗಿರುವ ಶಿಕ್ಷೆಯನ್ನು ಸಹಾಯ ಮಾಡಿದವರಿಗೆ ವಿಧಿಸಲಾಗುತ್ತದೆ ಎಂದು ಡಂಗೂರ ಸಾರುತ್ತಿದ್ದರು. ಇದು ಅನಕ್ಷರಸ್ಥ ಸಮಾಜದಲ್ಲಿ ಸಾಮಾನ್ಯವಾಗಿ ವಿಧಿಸುತ್ತಿದ್ದ ಆರಂಭದ ಶಿಕ್ಷೆಯಾಗಿತ್ತು. ಮೊದಲೇ ವಿಧಿಸಿದ ದಂಡವನ್ನು ಅಪರಾಧಿ ನಿಗದಿಪಡಿಸಿದ ವೇಳೆಗೆ ಕೊಡದಿದ್ದರೆ ಅದರ ಮೇಲೆ ಹೆಚ್ಚಿನ ದಂಡವನ್ನು ಜರಿಮಲೆ ಪಾಳೆಯಗಾರರು ವಿಧಿಸುತ್ತಿದ್ದರು. ಇಂಥ ದಂಡ ದೋಷಗಳಿಂದ ಬಂದಂಥ ಹಣವನ್ನು ಸಾರ್ವಜನಿಕ ಸ್ವತ್ತುಗಳಿಗೆ ವಿನಿಯೋಗಿಸುತ್ತಿದ್ದರು. ಈ ನಮೂನೆಯ ದಂಡ ದೋಷಗಳಿಲ್ಲದೆ ಯಾರಾದರೂ ಮದುವೆಯಾದರೆ ಅವರು ಬಡವರಾಗಲಿ,

ಸಾಹುಕಾರರಾಗಲಿ ಆ ಸಂದರ್ಭದಲ್ಲಿ ಊರಿನವರಿಗೆಲ್ಲ ಒಪ್ಪೊತ್ತಿನ ಊಟ ಹಾಕಿಸುವುದರ ಮೂಲಕ ಮುಖಂಡರ ಮನಸ್ಸನ್ನು ಒಲಿಸಬೇಕಿತ್ತು.

ಊಟ ಹಾಕುವ ಸಾಮರ್ಥ್ಯವಿಲ್ಲದಿದ್ದರೆ ಪಂಚಾಯತಿಯವರು ವಿಧಿಸಿದ ಹಣವನ್ನು ತೆರಬೇಕಿತ್ತು. ಕೊಡದಿದ್ದರೆ ಜಾತಿಯಿಂದ ಹೊರಗಟ್ಟುತ್ತಿದ್ದರು. ಈ ರೀತಿ ಬಂದ ಹಣವು ಧರ್ಮದ ಹೆಸರಿನಲ್ಲಿ ಸೇರುತ್ತಿತ್ತು. ರಾಜ ಪ್ರತ್ಯಕ್ಷ ದೇವರು ಎಂದು ನಂಬಿದ್ದ ಕಾಲವೂ ಇತ್ತು. ದೇವರ ಆದೇಶದಂತೆ ಆತ ನ್ಯಾಯ ನೀಡುತ್ತಾನೆಂಬ ಕಲ್ಪನೆಯೂ ಇತ್ತು, ಆತನ ಆಸ್ಥಾನವೂ ಈ ಕಾರಣದಿಂದಾಗಿ ನ್ಯಾಯಪೀಠವೆನಿಸಿತ್ತು. ವಾಹನ ಸೌಕರ್ಯವಿಲ್ಲದೆ ಸಂದರ್ಭದಲ್ಲಿ ಜನರು ಸಣ್ಣಪುಟ್ಟ ಜಗಳಗಳ ನ್ಯಾಯಕ್ಕೆ ಅವರ ಬಳಿಗೆ ಹೋಗುವುದು ಕಷ್ಟದ ಕೆಲಸವಾಗಿತ್ತು. ಆಗ ಅವರ ಪರಿಸರದಲ್ಲಿಯೇ ಇದ್ದ ಸಂಗ್ರಹಣ ದ್ರೋಣಾಮುಖ, ಸ್ಥಾನಿಯ ಎಂಬ ವಿವಿಧ ರೀತಿಯ ಅಧಿಕಾರದ ಬಲವನ್ನು ಹೊಂದಿರುವ ತೀರ್ಪು ನೀಡುವ ಕೇಂದ್ರಗಳಿದ್ದವು. ಗ್ರಾಮಸಭೆ, ಮಹಾಸಭೆಗಳು ತೀರ್ಪುನೀಡುವ ಹೊಣೆಯನ್ನು ಹೊತ್ತಿದ್ದವು. ಕುಲವು ಒಳನಾಡಿನ ಪ್ರಥಮ ನ್ಯಾಯ ಸ್ಥಾನವಾಗಿತ್ತು. ಕುಲ, ಗ್ರಾಮಸಭೆ, ಮಹಾಜನ ಇವುಗಳ ತೀರ್ಮಾನ ಪಕ್ಷಕಾರರಿಗೆ ಸಮಾಧಾನಕರವೆನಿಸದಿದ್ದಾಗ ಅಲ್ಲಲ್ಲಿ ನಿಯುಕ್ತವಾಗಿದ್ದ ಶ್ರೇಣಿಗಳು ಅಂದರೆ ವಾಣಿಜ್ಯ ಸಂಸ್ಥೆಗಳು, 'ಪೂಗ'ಗಳು ಅಂದರೆ ವೃತ್ತಿ ಸಂಸ್ಥೆಗಳು ನ್ಯಾಯ ತೀರ್ಮಾನದ ಮಧ್ಯೆ ಘಟ್ಟಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ರಾಜನ ಆಸ್ಥಾನವೇ ಮೇಲು ಮನವಿಯ ನ್ಯಾಯಸ್ಥಾನವಾಗಿರುತ್ತಿತ್ತು.

ಹಿಂದೆ ಆಡಳಿತ ಪದ್ಧತಿಯಲ್ಲಿ ಸುಳ್ಳು ಸಾಕ್ಷಿಗಳನ್ನು ಹೇಳುವವರು ಶಿಕ್ಷೆಗೆ ಗುರಿಯಾಗುತ್ತಿದ್ದರು. ಇಂಥವರು ಸ್ನಾನ ಮಾಡಿ ದೇವರು ಸಾಕ್ಷಿ ಹೇಳಬೇಕಾಗಿತ್ತು. ಅದಕ್ಕೆ ಮುಂಚೆ ನಿಜವನ್ನೇ ಹೇಳಬೇಕೆಂದೂ ಇಲ್ಲದಿದ್ದರೆ ಕಠಿಣ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆಂದೂ ಅವರಿಗೆ ಹೇಳಲಾಗುತ್ತಿತ್ತು. ಸಾಕ್ಷಿ ಹೇಳುವವರು ನಿಜವನ್ನೇ ಹೇಳುತ್ತಾರೆಂಬ ನಂಬಿಕೆ ನಮ್ಮಲ್ಲಿರುವುದರಿಂದ ಅವರನ್ನು ಪೂಜ್ಯ ಭಾವನೆಯಿಂದ ಸಹನೆಯಿಂದಲೇ ಕಾಣುತ್ತಿದ್ದರು. ತಮ್ಮ ಕಡೇ ಸಾಕ್ಷಿ ಹೇಳುವವರಲ್ಲಿ ತಮ್ಮ ಜಾತಿಯವರನ್ನೇ ಆರಿಸುತ್ತಿದ್ದರು. ಸೂಕ್ತ ವ್ಯಕ್ತಿಗಳು ಅವರ ಜಾತಿಯಲ್ಲಿ ದೊರಕದಿದ್ದಾಗ ಹತ್ತಿರದಲ್ಲಿಯೇ ಇರುವ ಅನ್ಯ ಜಾತಿಯವರನ್ನು ಸಾಕ್ಷಿಗಾರರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಕೊಲೆ, ಕಳವು, ವ್ಯಭಿಚಾರ, ನಿಂದೆ ಮೊದಲಾದ ಅಪರಾಧವೆಸಗಿದವರು ಸಾಕ್ಷಿದಾರರಾಗಲು ಅನರ್ಹರಾಗದ್ದಿರು. ಅದೇ ರೀತಿಯಾಗಿ, ಮಾರ್ಗಗಳ್ಳರು, ಮಾಯಾವಿಗಳು, ಮಾಂತ್ರಿಕರು, ಐಂದ್ರಜಾಲಿಕರು ಮತ್ತು ಸದಾ ವ್ಯಾಜ್ಯ ನಿರತರು ಅಥವಾ ದ್ಯೂತಾಸಕ್ತರು (ಜೂಜಾಡುವವರು) ಅನರ್ಹರಾಗಿದ್ದರು. ದಾಸ್ಯ ವೃತ್ತಿಯಲ್ಲಿರುವ ಸ್ತ್ರೀಪುರುಷರು ೧೫ಕ್ಕೆ ಮೀರದ ಅಲ್ಪ ವಯಸ್ಕರು, ೮೦ರ ಗಡಿದಾಟಿದ ವಯೋವೃದ್ಧರು ಹಾಗೂ ಕುಷ್ಠಾದಿರೋಗ ಸಂಸರ್ಗಿಗಳು ಸಾಕ್ಷಿದಾರರಾಗಲು ಅನರ್ಹರಾಗಿದ್ದರು. ಘಟನೆಯನ್ನು ಸಾಕ್ಷಾತ್ತಾಗಿ ನೋಡಿದವನು, ತನ್ನ ಕಿವಿಯಿಂದಲೇ ಕೇಳಿದವನು, ತನ್ನ ಕೈ, ಮೈ ಸ್ಪರ್ಶದಿಂದ ಶೀತೋಷ್ಣಾದಿಗಳನ್ನು ಅರಿತವನು, ತನ್ನ ಮೂಗಿನಿಂದಲೇ ಹಿತಾಹಿತ ವಾಸನೆಯನ್ನು ಅನುಭವಿಸಿದವನು, ತನ್ನ ನಾಲಿಗೆಯಿಂದಲೇ ಪಥ್ಯಾಪಥ್ಯ ರುಚಿಯನ್ನು

ನೋಡಿದವನು ಸಾಕ್ಷ್ಯ ಕೊಡಲು ಪರಮ ಸಮರ್ಥನಾಗಿದ್ದನು. ಇದನ್ನೆ ಪ್ರತ್ಯಕ್ಷ ಪ್ರಮಾಣ ಎಂದು ಜರಿಮಲೆ ಪಾಳೆಯಗಾರರು ಕರೆಯುತ್ತಿದ್ದರು.

ಕುರುಡ, ಕಿವುಡ, ಕಣ್ಣಿಗೆ ಪೊರೆ ಬಂದವನು, ಮದ್ಯಪಾನಾದಿಗಳಿಂದ ಮತ್ತನಾದವನು ಕೊಡುವ ಸಾಕ್ಷ್ಯಕ್ಕೆ ಮಾನ್ಯತೆಯಿರಲಿಲ್ಲ. ಜ್ಞಾನ ಕಾರ್ಯಕ್ಕೆ ಸಾಧಕವಾದ ಇಂದ್ರಿಯವು ದುರ್ಬಲವಾಗಿದ್ದರೆ ಜ್ಞಾನವು ಯಾಥಾರ್ಥ ಪ್ರಮಾಣ್ಯಂ ಎಂಬುದು ತರ್ಕಬದ್ಧ ತತ್ಸಾಧಕವು ಅನುಪ್ರಮಾಣವೆಂದೂ ಪ್ರಮಾಣ ಲಕ್ಷಣಕಾರ ನಿರೂಪಿಸುತ್ತಿದ್ದರು. ಜರಿಮಲೆ ಪಾಳೆಯಗಾರರ ಕಾಲದಲ್ಲಿ ವ್ಯವಸ್ಥಿತವಾದ ನ್ಯಾಯ ವಿತರಣ ಪದ್ಧತಿ ಇದ್ದರೂ ಅದು ಜಾತಿ ಶ್ರೇಣಿ ಆಧಾರಿತ ಸಾಂಪ್ರದಾಯಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳ ಆಧಾರದ ಮೇಲೆ ನ್ಯಾಯ ವಿತರಣೆ ಜಾರಿಯಲ್ಲಿತ್ತು. ರಾಜರು ತಮ್ಮ ಪ್ರಜೆಗಳಿಗೆ ವಿಧಿಸುತ್ತಿದ್ದ ಪ್ರಾಚೀನ ಭಾರತದ ಒಂದು ಶಿಕ್ಷಾ ವಿಧಾನವನ್ನು ಅಗ್ನಿ ಪುರಾಣ ಒದಗಿಸುತ್ತದೆ. ಅವುಗಳಲ್ಲಿ ಬಹುಪಾಲು ಕಠಿಣ ಶಿಕ್ಷೆಗಳು ಶೂದ್ರರಿಗೆ ಅಂದರೆ ದುಡಿಯುವ ಅಂದರೆ ದುಡಿಯುವವರಿಗೆ ಮಾತ್ರ.

ಪ್ರಾಚೀನ ಭಾರತದ ಅಪರಾಧಸಂಹಿತೆಯ ಪ್ರಕಾರ ಪ್ರಥಮ ಸಾಹಸದಂಡ ವಿಧಿಸುವುದು. ಇದು ಮೊದಲನೇ ದರ್ಜೆಯ ಶಿಕ್ಷೆ, ಮಧ್ಯಮ ವರ್ಗದ ಶಿಕ್ಷೆ, ಉತ್ತಮ ಸಾಹಸದಂಡ, ಇದು ಮೇಲ್ದರ್ಜೆಯ ಶಿಕ್ಷೆ ಎಂಬ ಮೂರು ವಿಭಾಗಗಳನ್ನು ಕಾಣುತ್ತೇವೆ. ಸುಳ್ಳು ಹೇಳಿಕೆಗಳನ್ನು ನೀಡುವ ಬ್ರಾಹ್ಮಣೇತರರನ್ನು ಕಠಿಣ ಶಿಕ್ಷೆಗೆ ಗುರಿಪಡಿಸುತ್ತಿದ್ದರು. ಒಂದು ವೇಳೆ ಬ್ರಾಹ್ಮಣನೇ ಸುಳ್ಳು ಹೇಳಿದರೂ ಆತನನ್ನು ಸಮಾಜದಿಂದ ದೂರವಿಡುತ್ತಿದ್ದರು. ತನ್ನಲ್ಲಿರುವ ರೋಗಗಳನ್ನು ಮರೆಮಾಚಿ ಒಬ್ಬ ಹೆಂಗಸಿನೊಡನೆ ಮದುವೆಯಾದರೆ ಆ ಹೆಣ್ಣನ್ನು ಅವಿವಾಹಿತಳೆಂದು ಪರಿಗಣಿಸುವುದರ ಜೊತೆಗೆ ಆಕೆಯನ್ನು ಮದುವೆಯಾದ ಗಂಡಸಿಗೆ ಇನ್ನೂರು ಪಣಗಳ ದಂಡವನ್ನು ವಿಧಿಸಲಾಗುತ್ತಿತ್ತು. ಒಂದು ಜಾತಿಯವರು ಮತ್ತೊಂದು ಜಾತಿಯವರನ್ನು ಅವಹೇಳನ ಮಾಡಿದರೆ ಅದಕ್ಕೆ ಬೇರೆ ಶಿಕ್ಷೆಗಳಿದ್ದವು. ಬ್ರಾಹ್ಮಣನನ್ನು ಕ್ಷತ್ರಿಯ ಅವಹೇಳನ ಮಾಡಿದರೆ ಇಪ್ಪತ್ತೈದು ಪಣಗಳ ದಂಡವನ್ನು ಕೊಡಬೇಕಿತ್ತು. ಬ್ರಾಹ್ಮಣ ಅವಹೇಳನ ಮಾಡಿದರೆ ಐವತ್ತು ಪಣಗಳ ದಂಡ ಕೊಡಬೇಕಿತ್ತು. ಶೂದ್ರನನ್ನು ಬ್ರಾಹ್ಮಣ ಅವಹೇಳನ ಮಾಡಿದರೆ ಹನ್ನೆರಡು ಪಣಗಳ ದಂಡ ಕೊಡಬೇಕಿತ್ತು. ಬ್ರಾಹ್ಮಣನಿಗೆ ಶೂದ್ರನೊಬ್ಬ ಬುದ್ಧಿವಾದ ಹೇಳಲು ಹೋದರೆ ಅಂಥವನಿಗೆ ತೋಚಿದ ಶಿಕ್ಷೆ ವಿಧಿಸಲಾಗುತ್ತಿತ್ತು. ಇವೆಲ್ಲಕ್ಕಿಂತ ಮಿಗಿಲಾಗಿ ಕ್ಷತ್ರಿಯನನ್ನು ಶೂದ್ರನೇನಾದರೂ ಅವಹೇಳನ ಮಾಡಿದರೆ, ಶೂದ್ರನ ನಾಲಿಗೆಯನ್ನು ಕತ್ತರಿಸಲಾಗುತ್ತಿತ್ತು. ಬ್ರಾಹ್ಮಣನ ಮೇಲೆ ಶೂದ್ರನೊಬ್ಬ ಉಗುಳಿದರೆ ಆತನ ಎರಡು ತುಟಿಗಳನ್ನು ಕತ್ತರಿಸುತ್ತಿದ್ದರು.

ಕ್ಷತ್ರಿಯರಿಗೆ ಬ್ರಾಹ್ಮಣರು ವೇದಗಳನ್ನು ಹೇಳಿಕೊಡುವ ಪದ್ಧತಿ ಸುಮಾರು ಹತ್ತನೆಯ ಶತಮಾನದಲ್ಲಿ ಇದ್ದಿತಾದರೂ ವೈಶ್ಯ ಮತ್ತು ಶೂದ್ರರು ವೇದಗಳನ್ನು ಬಾಯಿಂದ ಹೇಳುವುದಾಗಲೀ ಕಿವಿಯಿಂದ ಕೇಳುವುದಾಗಲಿ ನಿಷಿದ್ಧವಾಗಿತ್ತು. ಇಂಥ ದಂಡನೆಗಳನ್ನು ವಿಧಿಸುವುದರ ಮೂಲಕವೂ ಕೆಳವರ್ಗದವರಿಗಿಂತ ಮಿಗಿಲಾದ ಸವಲತ್ತುಗಳನ್ನು ಮೇಲ್ವರ್ಗದವರು ತಮ್ಮ ತಮ್ಮ ಗಡಿಗಳಿಗೆ

ಸಂಬಂಧಿಸಿದಂತೆ ಕಟ್ಟಳೆಗಳನ್ನು ಬೇರಾವ ಜಾತಿಯವರೇ ವಿರೋಧಿಸಿದರೂ ಅಂಥವರನ್ನು ದಂಡಿಸಿ ತಮ್ಮ ಆಶ್ರಮ ಧರ್ಮಕ್ಕೆ ಸೇರಿಸಿಕೊಳ್ಳುವ ವಿಚಾರಗಳು ಧರ್ಮಶಾಸ್ತ್ರದಲ್ಲಿವೆ. ಎಣ್ಣೆಯಲ್ಲಿ ಹಾಕಿ ಕುದಿಸುವುದು, ಕುದಿಯುತ್ತಿರುವ ಎಣ್ಣೆಯಲ್ಲಿರುವ ಚಿನ್ನದ ಚೂರನ್ನು ಹೊರ ತೆಗೆಸುವುದು, ಕಾದ ಕಬ್ಬಿಣವನ್ನು ಹಿಡಿದು ಏಳು ಹೆಜ್ಜೆ ನಡೆಸುವುದು, ತಕ್ಕಡಿಯಲ್ಲಿ ತೂಗುವುದು, ದೇವರ ತೀರ್ಥ ಕುಡಿಸುವುದು, ಸುಡುವುದು, ಚಕ್ರಕ್ಕೆ ತಲೆಕೊಡುವುದು, ನೀರಿನಲ್ಲಿ ಮುಳುಗಿಸುವುದು ಮೊದಲಾದ ದಂಡನೆಗಳು ಒಂದು ಕಾಲದಲ್ಲಿ ರೂಢಿಯಲ್ಲಿದ್ದವು.

ಜರಿಮಲೆ ಪಾಳೆಯಗಾರರ ಕಾಲದ ನ್ಯಾಯ ತೀರ್ಮಾನವು ಈ ಕೆಳಗಿನಂತೆ ಆರು ಹಂತಗಳಲ್ಲಿ ನಡೆಯುತ್ತಿತ್ತು. ಅರಸ, ಐದುಜನರು, ಹಿರಿಯರು, ಮತಸ್ಥರು, (ದೈವದವರು) ತಳವಾರ ಮತ್ತು ಕುಟುಂಬದವರು ಕುಟುಂಬ-ಕುಟುಂಬಗಳ ಮಧ್ಯೆ ಇರುವ ಮನೆಗೆ ಹೊಲಕ್ಕೆ, ಬೆಳ್ಳಿ, ಬಂಗಾರ, ಆಸ್ತಿಗೆ ಸಂಬಂಧಿಸಿದಂತೆ ಕಲಹವಾದರೆ ಮನೆಯಲ್ಲಿರುವ ಹಿರಿಯರೇ ಬಗೆಹರಿಸುತ್ತಿದ್ದರು. ಆ ಕುಟುಂಬದ ಸದಸ್ಯರು ಯಜಮಾನನ ನಿರ್ಣಯಕ್ಕೆ ಒಪ್ಪಬೇಕಾಗಿತ್ತು. ಕೆಲವು ಸಲ ಕುಟುಂಬದ ಯಜಮಾನ ಮತ್ತು ಕುಟುಂಬದ ಸದಸ್ಯರಿಗೂ ಜಗಳವಾದರೆ, ಈ ವಿಷಯ ತೀರ್ಮಾನಕ್ಕೆ ಬರದೆ ಹೋದರೆ ಊರಿನ ತಳವಾರನಿಗೆ ತಿಳಿಸಲಾಗುತ್ತಿತ್ತು. ಇಲ್ಲವೇ ಈ ತಳವಾರನೇ ವಿಷಯವನ್ನು ಪತ್ತೆ ಹಚ್ಚುತ್ತಿದ್ದ ಆಗ ಊರಿನ ಒಟ್ಟು ದೈವದವರನ್ನು ಒಂದೆಡೆ ಸೇರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ. ರಾಜನಿಗೂ ಈ ವಿಷಯವನ್ನು ತಿಳಿಸಿರಲಾಗುತ್ತಿತ್ತು. ಆಗ ಒಟ್ಟು ದೈವದವರು ಒಂದು ನಿಗದಿತ ದಿನದಂದು ನಿಗದಿತ ಸ್ಥಳದಲ್ಲಿ ಸೇರುತ್ತಿದ್ದರು.

ದೊರೆಯೊಂದಿಗೆ ಕಟ್ಟೆ ಮನೆಯ ಯಜಮಾನ, ನಾಯಕವಾಡಿಯ ಕುಲದ ಪ್ರತಿನಿಧಿಗಳು ಸೇರಿ ವಿಚಾರಣೆ ನಡೆಸಿ ತೀರ್ಮಾನ ಕೊಡುವ ವ್ಯವಸ್ಥೆ ಇತ್ತು. ಇದಕ್ಕೆ ನ್ಯಾಯ ಬೇಡುವವರು ಬದ್ಧರಾಗಲೇಬೇಕಿತ್ತು. ಮೀರಿದರೆ ದುಡ್ಡಿನದಂಡ, ಕೆಲವು ಬಾರಿ ಜಾತಿಯಿಂದ ಬಹಿಷ್ಕಾರ ಹಾಕುತ್ತಿದ್ದರು. ಇನ್ನೂ ಕೆಲವು ಬಾರಿ ತಪ್ಪತಸ್ಥರೆಂದು ತೀರ್ಮಾನಿಸಿದವರೊಂದಿಗೆ ಕುಲಸ್ಥರು ಯಾವ ರೀತಿಯಲ್ಲೂ ವ್ಯವಹರಿಸಬಾರದೆಂದು ನಿಷೇಧಿಸುತ್ತಿದ್ದರು. 'ನೀರು-ಬೆಂಕಿ'ಯ ನಿಷೇಧವನ್ನು ಹಾಕುತ್ತಿದ್ದರು. ಈ ದಂಡನೆಗೆ ಗುರಿಯಾದವರು ಸಾರ್ವಜನಿಕ ಅಥವಾ ಕುಲಸ್ಥರು ಬಳಸುವ ಬಾವಿಯಿಂದ ನೀರು ಸೇದುವಂತಿಲ್ಲ. ಬೆಂಕಿಕಡ್ಡಿ ಇಲ್ಲದ ಕಾಲದಲ್ಲಿ ಒಲೆ ಹೊತ್ತಿಸಲು ಬೇರೊಬ್ಬರ ಮನೆಯಿಂದ ಬೆಂಕಿಕೆಂಡವನ್ನು ತರಬೇಕಾಗಿತ್ತು. ಬಹಿಷ್ಕಾರಕ್ಕೆ ಒಳಗಾದವರಿಗೆ ಆ ಸೌಲಭ್ಯವೂ ದೊರೆಯುತ್ತಿರಲಿಲ್ಲ. ಜೊತೆಗೆ ಯಾರು ಮಾತನಾಡಿಸುತ್ತಿರಲಿಲ್ಲ. ಅವರು ಅನಿವಾರ್ಯವಾಗಿ ಊರು ತೊರೆದು ಹೋಗಬೇಕಾಗಿತ್ತು.

ಶಿಷ್ಟ ಪಾಳೆಯ ಪಟ್ಟುಗಳಲ್ಲಿ ಕಂಡುಬರುವ 'ಶೂಲದಶಿಕ್ಷೆ'ಯಂತಹ ಪ್ರಾಣ ತೆಗೆಯುವಂತಹ ಶಿಕ್ಷೆಗಳನ್ನು ಬುಡಕಟ್ಟು ನ್ಯಾಯಾಲಯಗಳಾದ ಕಟ್ಟೆಮನೆ ಸಂಸ್ಥಾನಗಳಲ್ಲಿ ವಿಧಿಸುತ್ತಿರಲಿಲ್ಲ. ಕೆಲವೊಮ್ಮೆ ಬಹಳ ಉಗ್ರ ಕ್ರಮ ಎಂದರೆ ಕೈಕತ್ತರಿಸುವ, ಕವಣೆ ಏಟು ಕೊಡುವ, ಗಡಿಪಾರು ಮಾಡುವ ಶಿಕ್ಷೆಗಳನ್ನು ವಿಧಿಸುತ್ತಿದ್ದರೆಂದು ಅಪರಾಧಿ ತನ್ನ ಪ್ರಾಮಾಣಿಕತೆಯನ್ನು ಸಾಬೀತುಪಡಿಸಲು

ಹಾಲು ಹಿಡಿದು ಪ್ರಮಾಣ ಮಾಡಬೇಕಿತ್ತು. ಪ್ರಮಾಣ ಮಾಡಲು ಹಿಂಜರಿದರೆ ಅಪರಾಧಿಯೆಂದು ತೀರ್ಮಾನಿಸುತ್ತಿದ್ದರು.

ಕಳವು ಹಣದ ದುರುಪಯೋಗ, ಪರಸ್ಪರ ಬೈದಾಟದಂಥ ಅಪರಾಧಿಗಳಿಗೆ ಶಿಕ್ಷೆಯ ಬಗ್ಗೆ ತಿಳಿಸಲಾಗಿದೆ. ಅರಮನೆ ಸೀಮೆಯಲ್ಲಿರುವವರು ಯಾರೇ ಬೈದಾಡಿದರೂ ಇಬ್ಬರನ್ನು ಕರೆಸಿ ವಿಚಾರಣೆ ನಡೆಸಬೇಕು. ಹೆಚ್ಚು ಬೈದವನಿಗೆ ಕಡಿಮೆ ಬೈಸಿ ಕೊಂಡವನಿಂದ ಒಂದಕ್ಕೆರಡು ಬೈಗುಳ ಹಾಕಿಸಿ ಎಚ್ಚರಿಸಿ ಬಿಡುವುದು, ಹೊಡೆದಾಡಿದವರಿಗೂ ಇದೇ ರೀತಿ ಒಂದಕ್ಕೆ ಎರಡರಷ್ಟು ಹೊಡೆತ ಕೊಡಿಸಿ ಎಚ್ಚರಿಸಿ ಬಿಡುವುದು, ಕಳ್ಳತನ ಮಾಡಿದವರಲ್ಲಿ ಕದ್ದ ವಸ್ತುವಿನ ಒಂದೂವರೆಯಷ್ಟು ಮೌಲ್ಯವನ್ನು ವಸೂಲು ಮಾಡುವುದು ಅದರಲ್ಲಿ ಒಂದು ಪಾಲಿನ ಹಣ ಅಥವಾ ವಸ್ತು ವಾರಸುದಾರನಿಗೂ ಉಳಿದರ್ಧವು ಹಾಕಿದ ದಂಡವೆನಿಸಿ ಸರ್ಕಾರಕ್ಕೂ ಸಲ್ಲುವಂಥದ್ದು ಎಂದು ಹೇಳಿ ದಂಡ ಕೊಡಲು ತಪ್ಪಿದರೆ ಛಡಿ ಏಟು ಅಥವಾ ರಸ್ತೆ ಕೆಲಸಗಳನ್ನು ಮಾಡಿಸುವುದು ಎಂದೆಲ್ಲ ತಿಳಿಸಲಾಗಿದೆ. ಊರಗೌಡನು ಸಾಮಾನ್ಯ ಅಪರಾಧಗಳ ಬಗ್ಗೆ ನ್ಯಾಯ ತೀರ್ಮಾನ ಮಾಡಬಹುದಿತ್ತು. ದೊಡ್ಡ ಅಪರಾಧ ಅಥವಾ ಹೀನ ಕೃತ್ಯಗಳ ಕುರಿತು ನ್ಯಾಯ ಅಧಿಕಾರ ಅವನಿಗಿರಲಿಲ್ಲ. ಸಾಮಾನ್ಯ ಅಪರಾಧಿಯನ್ನು ಪಾರು ಪತ್ಯೆಗಾರನ ಕಚೇರಿಗೆ ಒಯ್ಯಬೇಕಿತ್ತು. ಆ ಪಾರುಪತ್ಯೆಗಾರನು ಮೂರು ದಿನಗಳ ಸಜೆ ಮಾತ್ರ ಕೊಡುವ ಅಧಿಕಾರ ಹೊಂದಿದ್ದ.

ಜಾತಿ ಸಂಬಂಧದ ವಿವಾದಗಳನ್ನು, ನಿರ್ದಿಷ್ಟ ಜಾತಿ ಆಚಾರ-ವಿಚಾರಗಳನ್ನು ನೋಡಿಕೊಳ್ಳುವ ಹೊಣೆದಾರನಾದ ಕುಲದ ಮುಖ್ಯಸ್ಥನು ತೀರ್ಮಾನಿಸುತ್ತಿದ್ದ. ದೈಹಿಕ ಶಿಕ್ಷೆಯು ಕೇವಲ ಅಪರಾಧಿ ಅಥವಾ ತಪ್ಪಿತಸ್ಥ ಜನರಿಗಷ್ಟೇ ನೇಮಿತವಾಗಿರಲಿಲ್ಲ. ಕೆಲವು ವೇಳೆ ರಾಜದ್ರೋಹ ಅಥವಾ ರಾಜವಿರೋಧಿ ದಿವಾನರಿಗೂ ಈ ಶಿಕ್ಷೆಯಿಂದ ವಿನಾಯಿತಿ ಇರಲಿಲ್ಲ. ಅಂದರೆ ನ್ಯಾಯದ ಮುಂದೆ ಯಾರು ದೊಡ್ಡವರಲ್ಲ ಎಂಬ ಸಂಕೇತ ಇಲ್ಲಿದೆ. ಒಂದು ರೀತಿಯಲ್ಲಿ ರಾಜನ ಆಡಳಿತಾವಧಿಯಲ್ಲಿ ವಿಕಸಿತವಾದ ಪ್ರಜಾಮುಖಿ ನ್ಯಾಯ ವ್ಯವಸ್ಥೆ ಇದಾಗಿತ್ತೆನ್ನಬಹುದು.

ಕ್ರಿಮಿನಲ್ ಸ್ವರೂಪದ ಕೊಲೆ, ಹಾದರ, ಪಿತೂರಿ, ಪಲಾಯನ ಇತ್ಯಾದಿ ಅಪರಾಧಗಳಿಗೆ ನೀಡುವ ಶಿಕ್ಷೆಗಳು ಕಠಿಣವಾಗಿದ್ದವು. ಕೊಲೆಯ ಅಪರಾಧಿಗೆ ನೇರವಾಗಿ ಶಿಕ್ಷೆ ವಿಧಿಸುತ್ತಿರಲಿಲ್ಲ. ನಾಡಿನ ಪಾರುಪತ್ಯೆಗಾರರು ಹಾಗೂ ಸುಬೇದಾರರು ಆರೋಪಿತ ಕೊಲೆಗಾರರನ್ನು ಬಂಧಿಸಿ ಮೊದಲು ವಿಚಾರಣೆಗೆ ಒಳಪಡಿಸಬೇಕಿತ್ತು. ರಾಜನು ಈ ಸಂದರ್ಭದಲ್ಲಿ ನಿಯುಕ್ತಿಗೊಳಿಸುತ್ತಿದ್ದ ನ್ಯಾಯಾಧಿಕಾರಿಗಳು ಬಂದಿಯನ್ನು ವಿಚಾರಣೆಯನ್ನು ಮಾಡಿ ತಮ್ಮ ತೀರ್ಮಾನವನ್ನು ರಾಜನಿಗೆ ವರದಿ ಮಾಡಬೇಕಿತ್ತು. ಅಪರಾಧದ ಸಂದರ್ಭಕ್ಕನುಗುಣವಾಗಿ ಕೊಲೆಗಾರನಿಗೆ ಕ್ಷಮೆ, ದಂಡ, ತೀವ್ರ ಹೊಡೆತ, ಅಂಗ ಊನ ಅಥವಾ ಮರಣದಂಡನೆ ಇವುಗಳಲ್ಲಿ ಯಾವುದಾದರೊಂದು ರಾಜನ ಆಣತಿಗನುಗುಣವಾಗಿ ಒದಗುತ್ತಿತ್ತು. ಕುಡಿದ ಅಮಲಿನಲ್ಲಿಯೋ ಬೇಟೆಯಾಡುತ್ತಿದ್ದ

ಸಂದರ್ಭದಲ್ಲಿಯೇ ದುಷ್ಟ ಪ್ರಾಣಿಗಳಿಂದ ಬೆಳೆಗಳನ್ನು ರಕ್ಷಿಸುವ ಸಂದರ್ಭದಲ್ಲಿಯೋ ಎಚ್ಚರಗೆಟ್ಟು ಮನುಷ್ಯನನ್ನು ಕೊಲೆ ಮಾಡಿದರೆ ಅದನ್ನು ಬಹಳ ತೀವ್ರ ಅಪರಾಧವೆಂದು ಪರಿಗಣಿಸಿ ಅನುಗುಣ ಶಿಕ್ಷೆ ನೀಡಲಾಗುತ್ತಿತ್ತು. ಕೆಲವು ಸಲ ಸಮಾಜದಿಂದ ಬಹಿಷ್ಕಾರ ಹಾಕಲಾಗುತ್ತಿತ್ತು. ಆಸ್ತಿ ಮುಟ್ಟುಗೋಲು ಹಣದ ರೂಪದಲ್ಲಿ ದಂಡ, ರಾಜದ್ರೋಹದ ಕೆಲಸ ಮಾಡಿದರೆ ಆನೆಕಾಲಿನಿಂದ ತುಳಿಸುವುದು, ತಲೆ ಬೋಳಿಸಿ ಕತ್ತೆಯ ಮೇಲೆ ಮೆರವಣಿಗೆ, ಕುಲದಿಂದ ಹೊರಹಾಕುವುದು, ದೈವಕ್ಕೆ ತಪ್ಪಿನ ಊಟ ಹಾಕುವುದು, ಅಕಸ್ಮಾತಾಗಿ ಕದ್ದ ವ್ಯಕ್ತಿ ಸಿಕ್ಕರೆ ಕದ್ದಿರುವ ವಸ್ತುವಿನ ಎರಡು ಪಟ್ಟನ್ನು ನೀಡುವುದು, ಅದರಲ್ಲಿ ಒಂದುವರೆಪಟ್ಟು ಆಸ್ತಿಯನ್ನು ವಾರಸುದಾರನಿಗೆ, ಉಳಿದ ಅರ್ಧ ಭಾಗವನ್ನು ಸರಕಾರದ ಖಜಾನೆಗೆ ನೀಡಬೇಕಾಗಿತ್ತು. ಕೆಲವು ಸಲ ಆತನ ಇಡೀ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತಿತ್ತು.

ಬಿರುಬಿಸಿಲಿನಲ್ಲಿ ನಿಲ್ಲಿಸಿ ಆತನಿಂದ ತಪ್ಪೊಪ್ಪಿಗೆಯನ್ನು ಪಡೆದುಕೊಳ್ಳಲಾಗುತ್ತಿತ್ತು. ಇಲ್ಲಿ ಸೆರೆಮನೆ ಇತ್ತು. ಹೀಗಾಗಿ ಕೆಲವು ಸಲ ಎರಡು ದಿನದಿಂದ ಹದಿನೈದು ದಿನಗಳವರೆಗೂ ಅಪರಾಧಿಯನ್ನು ಸೆರೆಯಲ್ಲಿಡುತ್ತಿದ್ದರು. ಹೆಚ್ಚಾಗಿ ವಿವಾದ ನಡೆದ ಸ್ಥಳದಲ್ಲಿಯೇ ನ್ಯಾಯ ನಿರ್ಣಯ ಆಗುತ್ತದೆ. ಜಗಳಗಳನ್ನು ಅನೌಪಚಾರಿಕವಾಗಿ ಪರಿಹರಿಸುವುದು ಸಾಮಾನ್ಯ, ಊರಿನ ಹಿರಿಯರು ನ್ಯಾಯ ನಿರ್ಣಯದಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ತಪ್ಪು ಒಪ್ಪುಗಳನ್ನು ನಿರ್ಣಯಿಸಲು ಸಮುದಾಯಗಳಲ್ಲಿ ವಿಶಿಷ್ಟ ಪದ್ಧತಿಗಳಿರುತ್ತವೆ. ಆದರೆ ಅವು ಬರವಣಿಗೆಗೆ ಇಳಿದ ನಿಯಮಗಳಲ್ಲ; ಅಥವಾ ಕಟ್ಟುನಿಟ್ಟಾಗಿ ಸೂತ್ರೀಕರಣ ಗೊಂಡಿರುವುದಿಲ್ಲ. ಜರಿಮಲೆ ಪಾಳೆಯಗಾರರ ಸಮುದಾಯಗಳು ಚಿಕ್ಕ ಗಾತ್ರವಿದ್ದು ಸಾಮಾನ್ಯವಾಗಿ ಜನರು ಒಬ್ಬರನ್ನೊಬ್ಬರು ಅರಿತಿರುವುದರಿಂದ ಹಾಗೂ ಊರಿನ ಹಿರಿಯರ ಮಾತನ್ನು ಒಪ್ಪಿಕೊಳ್ಳುವುದು ನೈತಿಕವಾಗಿ ಸರಿ ಮತ್ತು ವ್ಯವಹಾರಿಕವಾಗಿ ಅನಿವಾರ್ಯ ಎಂಬ ಭಾವನೆಯಿಂದ ಇಂತಹ ನ್ಯಾಯ ನಿರ್ಣಯಕ್ಕೆ ಬೆಲೆ ಬರುತ್ತದೆ, ಸಾಮಾನ್ಯವಾಗಿ ನ್ಯಾಯ ನಿರ್ಣಯ ಮಾಡುವವರಿಗೆ ವಾದಿ–ಪ್ರತಿವಾದಿಗಳಿಬ್ಬರ ಶಕ್ತಿ–ದೌರ್ಬಲ್ಯಗಳ ಪರಿಚಯವಿರುತ್ತದೆ.

ಈ ರೀತಿಯಾಗಿ ಜರಿಮಲೆ ಪಾಳೆಯಗಾರರ ನ್ಯಾಯಾಡಳಿತವನ್ನು ಕಾಣಬಹುದು.

## ಜರಿಮಲೆ ಪಾಳೆಯಗಾರರ ಇತ್ತೀಚಿನ ವಂಶೀಕರು

ಇಂಗ್ಲೀಷರು ಜರಿಮಲೆಯನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ಈ ಪಾಳೆಯಗಾರರ ಮನೆತನದವರಿಗೆ ಸಹಾಯಧನವನ್ನು ಗೊತ್ತುಪಡಿಸಿದರು. ೧೮೭೬ ಜನವರಿಯಲ್ಲಿ ರಾಜಾ ಇಮ್ಮಡಿ ಲಕ್ಷ್ಮಪ್ಪನಾಯಕನು ರಾಣಿ ಸರಕಾರದವರಿಗೆ ಬರೆದುಕೊಂಡ ಮನವಿ ಪತ್ರದಲ್ಲಿ ಸರಕಾರದವರು ೩ ರೂಪಾಯಿ ೩ ಆಣೆ ೯ ಕಾಸುಗಳನ್ನು ಪೆನ್‌ಷನ್ ಆಗಿ ನೀಡುತ್ತಿದ್ದರೆಂದೂ ಅದನ್ನು ಆ ಮನೆತನದ ಆಳಿದವರು ಇಷ್ಟಿಷ್ಟು ಹಂಚಿಕೊಳ್ಳುತ್ತಿದ್ದರೆಂದೂ ಇತರ ವಿವರಗಳೊಡನೆ ಪ್ರತಿಷ್ಠಾಪಿಸಿದ್ದಾನೆ.

ಆದರೆ ಎಲ್ಲರ ಸಂಸಾರವೂ ಬೆಳೆದು ಪೆನ್‌ಷನ್ ಸಾಲುತ್ತಿಲ್ಲವಾದ್ದರಿಂದ ಅದನ್ನು ಹೆಚ್ಚಿಸಬೇಕೆಂದೂ ಇಲ್ಲವೇ ಜಹಗೀರನ್ನಾದರೂ ಹಾಕಿಕೊಡಬೇಕೆಂದು ಅದೂ ಇಲ್ಲವಾದರೆ ಸರಕಾರದಿಂದ ವಿಷಯವನ್ನಾದರೂ ಕಳುಹಿಸಿದಲ್ಲಿ ಅದನ್ನು ಸ್ವೀಕರಿಸಲಾಗುತ್ತದೆಂದೂ ಕಳಕಳಿಯಿಂದ ಬರೆದುಕೊಂಡಿದ್ದಾನೆ. ಇಮ್ಮಡಿ ಲಕ್ಷ್ಮಪ್ಪನಾಯಕನು ಇಂಗ್ಲೀಷ್ (ರಾಣಿ) ಸರಕಾರಕ್ಕೆ ತನ್ನ ಮತ್ತು ತನ್ನ ಅಣ್ಣ ರಾಮಪ್ಪನಾಯಕನಿಗೆ ದೊರಕುತ್ತಿದ್ದ ರಾಜಧನವನ್ನು ಹೆಚ್ಚುಸುವಂತೆ ಪ್ರಾರ್ಥನೆ ತೆಲುಗು ಭಾಷೆಯಲ್ಲಿ ಬರೆದುಕೊಂಡಿರುವ ಪತ್ರ ಇದು. ತಮ್ಮ ಹಿಂದಿನ ಕೆಲವರ ಹೆಸರುಗಳನ್ನು ಪ್ರಸ್ತಾಪಿಸಿದ್ದಾರೆ. ತನ್ನ ದೊಡ್ಡ ತಾತ ಬೊಮ್ಮನಾಯಕನೆಂದೂ ಎರಡನೆಯವನು ಇಮ್ಮಡಿ ನಾಯಕ ಹಾಗೂ ಮೂರನೆಯವರು ಮಲ್ಲಿಕಾರ್ಜುನ ನಾಯಕನೆಂದೂ ಹೆಸರಿಸಿದ್ದಾನೆ. ಆದರೆ ಇವರು ಇಂಗ್ಲೀಷರಿಂದ ಪೆನ್‌ಷನ್ ಪಡೆಯುತ್ತಿದ್ದರೆಂದು ಸೂಚಿಸಿರುವುದರಿಂದ ಈ ಸಂತತಿಯ ಆರಂಭದ ವ್ಯಕ್ತಿಗಳು ಇವರಲ್ಲವೆನ್ನುವುದು ಸ್ಪಷ್ಟ.

ಈ ಇಮ್ಮಡಿ ರಾಜಾಲಕ್ಷ್ಮಪ್ಪ ನಾಯಕನು ತನ್ನ ಚಿತ್ರದಲ್ಲಿ ಬೊಮ್ಮ ಅಥವಾ ಬೊಮ್ಮಳನಾಯಕನ ಆಗಿ ಹೋದ ಆತನ ಮಕ್ಕಳಾದ ಪೆದ್ದ (ದೊಡ್ಡ) ಸಿದ್ದಪ್ಪನಾಯಕ ಶಿದ್ದ ಲಿಂಗಪ್ಪ ಲಿಂಗನಾಯಕ ಮತ್ತು ಸಿದ್ದಪ್ಪನಾಯಕ ಅವರುಗಳನ್ನು ನಮೂದಿಸಿದ್ದಾನೆ. ತನ್ನ ಇನ್ನೊಬ್ಬ ತಾತ ಇಮ್ಮಡಿ ನಾಯಕ ಅಥವಾ ನಾಯಿಡುಗೆ ಚಿನ್ನ (ಚಿಕ್ಕ) ಸಿದ್ಧಪ್ಪನಾಯಕನೇ ಈ ಮನವಿ ಪತ್ರವನ್ನು ಬರೆದ ಇಮ್ಮಡಿ ರಾಜಾ ಲಕ್ಷ್ಮಪ್ಪನಾಯಕನ ತಂದೆ. ತನ್ನ ತಂದೆಗೆ ಇಬ್ಬರು ಮಡದಿಯರು ಇದ್ದುದನ್ನು ಹಿರಿಯ ಮಡದಿಯ ಮಗನೇ ತನ್ನ ಅಣ್ಣ ರಾಮಪ್ಪ ನಾಯಕನೆಂದೂ ತಾನು ಎರಡನೆಯವನೆಂದೂ ತನ್ನ ತಂದೆಯ ಎರಡನೆಯ ಮಡದಿಯ ಮಗನೇ ಹನುಮಪ್ಪ ನಾಯಕನೆಂದೂ ಹೇಳಿದ್ದಾನೆ. ಈತನ ಅಣ್ಣ ರಾಮಪ್ಪನಾಯಕನಿಗೆ ಸಿದ್ಧಪ್ಪನಾಯಕ, ಪೆನ್ನಪ್ಪ ನಾಯಕ ಮತ್ತು ಭೂಮಿರಾಜ ಎಂದು ಮೂರು ಮಂದಿ ಮಕ್ಕಳಿದ್ದುದು ಹಾಗೂ ಈ ರಾಜ ಲಕ್ಷ್ಮಪ್ಪ ನಾಯಕನಿಗೆ ನಿಂಗಣ್ಣನಾಯಕ, ಮಲ್ಲಿಕಾರ್ಜುನ ನಾಯಕ, ಸಿದ್ಧಪ್ಪನಾಯಕ ಮತ್ತು ಓಬಳನಾಯಕ ಎಂದು ನಾಲ್ವರು ಮಕ್ಕಳಿದ್ದುದು ಈ ಪತ್ರದಿಂದ ವ್ಯಕ್ತಪಡುತ್ತದೆ. ಈ ರಾಜಾ ಲಕ್ಷ್ಮಪ್ಪನಾಯಕನು ತನ್ನ ಮನವಿ ಪತ್ರದ ಆರಂಭದಲ್ಲಿ ತನ್ನನ್ನು "ಶ್ರೀಮಾನ್ ಮಹಾನಾಯಕ ಚಾರ್ಯ ನಾಯಕಶಿರೋಮಣಿ ಆಯಿನಾ ಯಿಮ್ಮಡಿ ರಾಜಲಕ್ಷ್ಮಪ್ಪ ನಾಯಿಣಿವಾರು"[೨೫] ಎಂತಲೂ "ಜರಿಮಲೆ ಸಮುಸ್ಥಾನಮುಕು ನುಂನ್ನಾ ಪಾಳೆಗಾರರು ಚಿನ್ನ ಸಿದ್ದಪ್ಪನಾಯಿನಿ ಕೊಮಾರುಡೈನ ಲಕ್ಷ್ಮಪ್ಪನಾಯಿಣಿವಾರು ಎಂದಲೂಕರೆದುಕೊಂಡಿದ್ದಾನೆ."[೨೬] ಏನೇ ಆದರೂ ಈಚಿನ ಕೆಲವು ವ್ಯಕ್ತಿಗಳ ಈ ವಂಶಿಕರ ಪೂರ್ತಿ ವಿವರಗಳು ತಿಳಿದುಬರುವುದಿಲ್ಲ.

**ಅಡಿಟಿಪ್ಪಣಿ**

೧. ಕಲಬುರ್ಗಿ ಎಂ.ಎಂ. (ಸಂ), ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪುಟ-೪೦೬.

೨. ಲಕ್ಷ್ಮಣ ತೆಲಗಾವಿ, ಜರಿಮಲೆ ಸಂಸ್ಥಾನದ ವಂಶಾವಳಿ (ಸಂ), ಚಂದ್ರವಳ್ಳಿ ಚಿತ್ರದುರ್ಗ, ೧೯೭೬, ಪುಟ-೩೭, ೫೦.

೩. ಯೋಗೀಶ್ವರಪ್ಪ ಡಿ.ಎನ್., ಜರಿಮಲೆ ನಾಯಕರು, ಕನ್ನಡ ಸಾಹಿತ್ಯ ಪರಿಷತ್, ೨೦೦೨, ಪುಟ-೩೧, ೪೭.

೪. ಯೋಗೀಶ್ವರಪ್ಪ ಡಿ.ಎನ್., ಜರಿಮಲೆ ನಾಯಕರು, ಕನ್ನಡ ಸಾಹಿತ್ಯ ಪರಿಷತ್, ೨೦೦೨, ಪುಟ-೩೭.

೫. ಅದೇ, ಪುಟ-೩೧, ೪೭.

೬. ಅದೇ, ಪುಟ-೩೪.

೭. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಪಾಳೆಯಗಾರರು, ಬೆಂಗಳೂರು, ೧೯೨೩, ಪುಟ-೩೧, ೩೨.

೮. ದೇವರಕೊಂಡಾರೆಡ್ಡಿ ಮತ್ತು ಇತರರು, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧೯೯೮, ಬಳ್ಳಾರಿ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೨೯.

೯. ಯೋಗೀಶ್ವರಪ್ಪ ಡಿ.ಎನ್., ಜರಿಮಲೆ ನಾಯಕರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೨, ಪುಟ-೩೮.

೧೦. ಅದೇ, ಪುಟ-೩೯.

೧೧. ಅದೇ, ಪುಟ-೪೧.

೧೨. ಮೆಕೆಂಜಿಯ ಹಸ್ತಪ್ರತಿಯಲ್ಲಿ ಮತ್ತು ಕರ್ನಾಟಕದ ಕೈಫಿಯತ್ತು, ಜರಿಮಲೆ ನಾಯಕರ ವಂಶಾವಳಿ, ೧೯೨೭, ಪು-೨೮.

೧೩. ಅದೇ.

೧೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ಬಳ್ಳಾರಿ ಜಿಲ್ಲೆ, ಕೂಡ್ಲಿಗಿ-೯, ೧೯೯೮, ಪುಟ-೨೨೯.

೧೫. ಅದೇ.

೧೬. ಕುಂ.ಬಾ. ಸದಾಶಿವಪ್ಪ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಮಾಲತೇಶ ಪ್ರಕಾಶನ, ೧೯೯೦, ಪುಟ- ೧೮೨-೧೮೩.

೧೭. ಕಲಬುರ್ಗಿ ಎಂ.ಎಂ. (ಸಂ), ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪು-೪೦೬.

೧೮. ಕಲಬುರ್ಗಿ ಎಂ.ಎಂ., (ಸಂ), ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪, ಪುಟ-೪೦೬.

೧೯. ರಾಜಶೇಖರಪ್ಪ ಬಿ., ಚಿತ್ರದುರ್ಗ ನಾಯಕರು ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ-೧೦೧.

೨೦. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಪಾಳೆಯಗಾರರು, ಪುನರ್ ಮುದ್ರಣ ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೯೭, ಪುಟ-೪೨.

೨೧. ಶ್ಯಾಮಲಾ ಸಿ.ಆರ್., ಪೂರ್ವಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೮, ಪುಟ-೧೬೧.

೨೨. ಅದೇ, ಪುಟ-೧೬೫.

೨೩. ಅದೇ, ಪುಟ-೧೮೦.

೨೪. ಲಕ್ಷ್ಮಣ ತೆಲಗಾವಿ, ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ೨೦೦೮, ಪುಟ-೧೫೦.

೨೫. ಲಕ್ಷ್ಮಣ ತೆಲಗಾವಿ, ವಿಜಯನಗರ ಅಧ್ಯಯನ ಸಂಪುಟ-೧೩, ವಿಜಯನಗರ ವಿಚಾರ ಸಂಕಿರಣ ೨೦೦೭ರಲ್ಲಿ ಮಂಡಿಸಿದ ಪ್ರಬಂಧಗಳು, ಪುಟ- ೨೩೪-೩೫.

೨೬. ಅದೇ ಪುಟ- ೨೩೪-೩೫.



# ಅಧ್ಯಾಯ : ನಾಲ್ಕು

## ಜರಿಮಲೆ ಪಾಳೆಯಗಾರರ ಕೊಡುಗೆಗಳು

೪.೧. ದೇವಸ್ಥಾನಗಳು
೪.೨. ಹಬ್ಬಹರಿದಿನಗಳು
೪.೩. ಪಾಳೆಯಗಾರರ ಕುಣಿತ
೪.೪. ನಂದಿಧ್ವಜ ಕುಣಿತ
೪.೫. ಜರಿಮಲೆ ಪಾಳೆಯಗಾರರ ಕೋಟೆಯ ಲಕ್ಷಣಗಳು
೪.೬. ತೊಟ್ಟಿಲು ಬಾವಿ
೪.೭. ಓಕಳಿ ಹೊಂಡ
೪.೮. ರಾಗಿ ಕಣಜ
೪.೯. ತುಪ್ಪದ ಕಣಜ

## ಅಧ್ಯಾಯ : ನಾಲ್ಕು

## ಜರಿಮಲೆ ಪಾಳೆಯಗಾರರು ಕೊಡುಗೆಗಳು

### ದೇವಸ್ಥಾನಗಳು

ರಾಜನು ಯುದ್ಧದಲ್ಲಿ ಗೆದ್ದು ಬಂದರೆ, ಮಗ ಹುಟ್ಟಿದರೆ, ಮಕ್ಕಳಿಗೆ ಮದುವೆಯಾದರೆ ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದರು. ಅಲ್ಲದೆ ಪ್ರೀತಿಯ ಜನರ ನಿಧನವಾದರೆ ಅವರ ಹೆಸರಿನಲ್ಲಿಯೂ ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದರು. ಬಡವರೂ ಕೂಡ ದೇವಸ್ಥಾನಗಳನ್ನು ಕಟ್ಟಿಸಲು ಉತ್ಸಾಹಿಗಳಾಗಿದ್ದರು. ಅದಕ್ಕಾಗಿ ಅವರು ವೀರವ್ರತವನ್ನು ಕೈಗೊಳ್ಳುತ್ತಿದ್ದರು. ದೇವಸ್ಥಾನಗಳನ್ನು ಕಟ್ಟಿಸಿದರೆ ಸಾಲದು, ಊರ್ಜಿತವೂ ಆಗಬೇಕಾಗುತ್ತದೆ. ಅದು ಭಕ್ತ ಜನರ ಕಾಣಿಕೆಗಳನ್ನೇ ಅವಲಂಬಿಸಿ ಕುಳಿತುಕೊಳ್ಳಲಾಗದು. ಆದ್ದರಿಂದ ದೇವಸ್ಥಾನವನ್ನು ಕಟ್ಟಿಸಿದ ವ್ಯಕ್ತಿಯೇ ಅದಕ್ಕೆ ದಾನ ದತ್ತಿಗಳನ್ನು ಕೊಡುತ್ತಿದ್ದನು. ಹೀಗೆ ದತ್ತಿಗಳನ್ನು ಬಿಟ್ಟು ಕೊಡುವಾಗಲೇ ಇವು ಇಂತಿಂತಹ ಅಂಶಗಳಿಗೆ ವಿನಿಯೋಗ ಆಗಬೇಕೆಂಬುದನ್ನು ಶಾಸನಗಳಲ್ಲಿ ಸೂಚಿಸುತ್ತಿದ್ದರು. ಅದರ ಜೊತೆಗೆ ದೇವಸ್ಥಾನದ ಬೇರೆ ಬೇರೆ ಅಧಿಕಾರಿಗಳಿಗೆ ಪ್ರತ್ಯೇಕವಾಗಿ ದತ್ತಿಗಳನ್ನು ಬಿಟ್ಟು ಅವರವರ ಕರ್ತವ್ಯಗಳನ್ನು ಸೂಚಿಸಿರುವುದು ಕಂಡುಬರುತ್ತದೆ. ದಾನವಾಗಿ ಕೊಡಲು ತನ್ನಲ್ಲಿ ಸ್ವಂತ ಭೂಮಿ ಇಲ್ಲದಿದ್ದಲ್ಲಿ ಬೇರವಯರ ಭೂಮಿಯನ್ನು ಕ್ರಯಕ್ಕೆ ತೆಗೆದುಕೊಂಡು ದಾನವಾಗಿ ಕೊಡುತ್ತಿದ್ದರು. ಕೆಲವೊಮ್ಮೆ, ಬೇರೆ ಬೇರೆ ವೃತ್ತಿಗಳಲ್ಲಿದ್ದವರು ವರ್ಷಕ್ಕೆ ತಾವು ಒಟ್ಟಾಗಿ ಇಷ್ಟು ಹಣವನ್ನೋ ಸಾಮಗ್ರಿಗಳನ್ನೋ ದೇವಸ್ಥಾನಕ್ಕೆ ಕೊಡುವುದಾಗಿ ಹರಕೆ ಹೊತ್ತು ಅದರಂತೆ ಸಲ್ಲಿಸುತ್ತಿದ್ದರು.

ದೇವಸ್ಥಾನಕ್ಕೆ ಬಂದ ದತ್ತಿ ದಾನಗಳನ್ನು ರಕ್ಷಿಸಲು ಧರ್ಮದರ್ಶಿಗಳನ್ನು ನೇಮಿಸುತ್ತಿದ್ದರು. ಒಬ್ಬನೇ ಇರಬಹುದು ಅಥವಾ ಒಂದು ಗುಂಪು ಜನರಿರಬಹುದು ಈ ಜವಾಬ್ದಾರಿಯನ್ನು ಸರಿಯಾಗಿ ಹೊತ್ತು ದೇವಸ್ಥಾನದ ಹಣವು ದೇವಸ್ಥಾನಕ್ಕೆ ಸರಿಯಾಗಿ ವಿನಿಯೋಗವಾಗುವಂತೆ ನೋಡಿಕೊಳ್ಳುವವರೇ ನಿಜವಾದ ದಾನಿಗಳಾಗುತ್ತಾರೆ. ದೇವಸ್ಥಾನದ ಅಧಿಕಾರದ ಪ್ರತಿ ವ್ಯಕ್ತಿಯೂ ತನ್ನ ಹೊಣೆಗಾರಿಕೆಯನ್ನು ತಿಳಿದಿರಬೇಕು. ಪೂಜಾರಿ, ಜ್ಯೋತಿಷ್ಯ, ಮಾಲೆಕಾರ, ಪತ್ರಗಳನ್ನು

ತರುವವ ತೋಟಗಾರ, ತೋಟದ ತಳವಾರ, ಸಂಗೀತಗಾರರು, ವಾದ್ಯಗಾರರು ಅಂಗಜಾವದ, ಧ್ವಜಹಿಡಿಯುವವ, ಅಡಿಗೆಯವರು, ಧಾನ್ಯಗಳನ್ನು ಸ್ವಚ್ಛ ಮಾಡುವವ ಹೆಂಗಸರು, ಧಾನ್ಯಗಳನ್ನು ಅಳೆದು ಕೊಡುವವರು, ಉಗ್ರಾಣವನ್ನು ನೋಡಿಕೊಳ್ಳುವವರು, ಪಾತ್ರದವರು, ಭಂಡಾರಿಗಳು ಇವರೆಲ್ಲಾ ಅಧಿಕಾರ ವರ್ಗಕ್ಕೆ ಸೇರಿದವರು. ಇವರಿಗಳಿಗೆ ಪ್ರತಿ ತಿಂಗಳು ವೇತನದ ಮೇಲೆ ಗೊತ್ತು ಮಾಡದೆ, ಶಾಶ್ವತವಾಗಿ ಭೂಮಿಯನ್ನು ಬಿಟ್ಟುಕೊಟ್ಟಿರುವುದರಿಂದ, ಅದರ ಆದಾಯದ ಮೇಲೆ ಜೀವನ ಸಾಗಿಸುತ್ತಿದ್ದರು. ಹೀಗಾಗಿ ದೇವಸ್ಥಾನಗಳು ಒಂದು ಸಾಮಾಜಿಕ ಸಂಸ್ಥೆಗಳಾಗಿದ್ದವು.

ಪಾಪಣ್ಣನಾಯಕನ ನಂತರ ಅವನ ಮಗನಾದ ಪೆನ್ನಪ್ಪನಾಯಕನು, ವಡ್ಡು, ದರೋಜಿಗಳ ಒಡೆಯನಾದನು. ಪೆನ್ನಪ್ಪ ನಾಯಕನ ನಿಷ್ಠೆ ಹಾಗೂ ಶೌರ್ಯಕ್ಕೆ ಚಕ್ರವರ್ತಿ ತುಳುವ ವೀರನರಸಿಂಹರಾಯನು ಗುಡಿಕೋಟೆ ಭೀಮಸಮುದ್ರಗಳನ್ನು ಬಳುವಳಿಯಾಗಿ ನೀಡುವನು. ನಾಯಕನು ಒಂದು ದೇವಾಲಯ ಮತ್ತು ಮಠವನ್ನು ನಿರ್ಮಿಸಿ, ಅವುಗಳಿಗೆ ಕೋಟೆ ಕಟ್ಟಿಸಿ ಉಜ್ಜನಿ ಎಂದು ಹೆಸರಿಟ್ಟು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡನು. ಭೂಮರಾಜನು ಗುಡಿಕೋಟೆ, ಸಂಡೂರು, ವಡ್ಡು, ದರೋದಿ, ಬಾಣಾರಾವಿ, ತುಡುತು,ಶಿ, ತೋಳಗಲ್ಲು, ಬಳ್ಳಾರಿ ಮುಂತಾದವುಗಳನ್ನು ಗೆದ್ದುಕೊಂಡನು. ದುರ್ಗಾದೇವಿಯ ದೇವಸ್ಥಾನ ಕಟ್ಟಿಸಿ ಕಾಶಿಯಿಂದ ಬ್ರಾಹ್ಮಣರನ್ನು ಕರೆಯಿಸಿದರು. ಉಗ್ರಾಣಿಕರು ಮತ್ತು ಗುಡಿನಾಯಕರನ್ನು ನೇಮಿಸಿ ಮೂವರನ್ನು ದೇವಸ್ಥಾನದ ಮುಖ್ಯಸ್ಥರನ್ನಾಗಿ ಮಾಡಿದರು.

ಕೋಟೆಯ ನೈರುತ್ಯ ಭಾಗದಲ್ಲಿ ಬಾಗೀಶ್ವರ ದೇವಾಲಯವಿದೆ. ಉತ್ತರಾಭಿಮುಖವಾಗಿರುವ ಈ ದೇಗುಲದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳಿವೆ. ಸಭಾಮಂಟಪದಲ್ಲಿ ಮೂರು ಪ್ರವೇಶ ಬಾಗಿಲುಗಳಿವೆ. ಗರ್ಭಗೃಹದಲ್ಲಿ ಪ್ರತಿಷ್ಠಾನ ಶಿವಲಿಂಗವಿದ್ದು, ಕಪ್ಪು ಶಿಲೆಯಲ್ಲಿ ಕೆತ್ತಲಾಗಿದೆ. ಇದು ಎರಡೂವರೆ ಅಡಿಗಳಷ್ಟು ಎತ್ತರವಿದೆ. ಶಿವಲಿಂಗಕ್ಕೆ ನೇರವಾಗಿ ಸಭಾಮಂಟಪದಲ್ಲಿ ನಂದಿಯಿದೆ. ದೇವಾಲಯದ ಕಂಬಗಳ ದಿಂಡು ನಾಲ್ಕು ಹಂತಗಳಲ್ಲಿದೆ. ಎರಡು ಹಂತಗಳನ್ನು ಚಚ್ಚೌಕವಾಗಿ, ಮಧ್ಯದ ಭಾಗವನ್ನು ಬಹುಮುಖಗಳಲ್ಲಿ ಹಾಗೂ ಮೇಲ್ಭಾಗದ ಬೋದಿಗೆಯನ್ನು ದಿಂಬಿನಾಕಾರದಲ್ಲಿ ಕೆತ್ತಿದ್ದಾರೆ. ಚಾಚುಪೀಠಗಳು ಮೊಗ್ಗಿನಾಕಾರದಲ್ಲಿವೆ. ಈ ದೇಗುಲದ ಗರ್ಭಗೃಹದ ಮೇಲೆ ಪಾಳೆಯಗಾರ ಶೈಲಿಯ ಏಕತಲದ ಶಿಖರವಿದೆ. ಇದರಲ್ಲಿ ಕೀರ್ತಿಮುಖ, ನಂದಿ ಅಲಂಕರಣೆಗಳಿವೆ. ಜರಿಮಲೆ ಪಾಳೆಯಗಾರರು ಕ್ರಿ.ಶ. ೧೭ನೇ ಶತಮಾನದಲ್ಲಿ ಈ ದೇವಾಲಯವನ್ನು ನಿರ್ಮಿಸಿರಬಹುದೆಂದು ಇದರ ಲಕ್ಷಣಗಳಿಂದ ಹೇಳಬಹುದು. ಕೋಟೆಯ ಪಶ್ಚಿಮ ಭಾಗದಲ್ಲಿರುವ ಮುರುಘಸ್ವಾಮಿ ಮಠವು ಪೂರ್ವಾಭಿಮುಖವಾಗಿದೆ. ಇದು ಜರಿಮಲೆ ಪಾಳೆಯಗಾರರ ಕಾಲದಲ್ಲಿ ಚಿತ್ರದುರ್ಗ ಮುರುಘರಾಜೇಂದ್ರ ಸ್ವಾಮಿಗಳ ಮಠದ ಒಂದು ಶಾಖೆಯಾಗಿದ್ದಿರಬಹುದು. ವಿಶಾಲವಾದ ಗರ್ಭಗೃಹ, ಸಭಾಮಂಟಪ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಯಾವುದೇ ವಿಗ್ರಹವಿಲ್ಲ. ಗರ್ಭಗೃಹವು ಸಭಾಮಂಟಪಷ್ಟೇ ಅಗಲವಾಗಿದ್ದು ಶ್ರೀಗಳು ವಾಸಿಸಲು

ಅನುವಾಗುವಷ್ಟು ಸ್ಥಳವಕಾಶವಿದೆ. ಇದರಲ್ಲಿ ನಾಲ್ಕು ಕಂಬಗಳಿದ್ದು, ಕಟಾಂಜನವಿದೆ. ಕಂಬಗಳು ಚಚ್ಚೌಕ ಹಾಗೂ ಬಹುಮುಖಗಳಲ್ಲಿವೆ. ಇವುಗಳ ಮೇಲೆ ದಿಂಬಿನಾಕಾರದ ಬೋದಿಗೆ ಹಾಗೂ ಮೊಗ್ಗಿನಂತಿರುವ ಚಾಚಪೀಠಗಳಿವೆ. ಉಳಿದ ಕಂಬಗಳು ಗೋಡೆಯಲ್ಲಿ ಸೇರಿವೆ. ದೇವಾಲಯಗಳನ್ನು ಕರ್ಣಶಿಲೆ ಮತ್ತು ಗಾರೆಯನ್ನು ಬಳಸಿ ಕಟ್ಟಲಾಗಿದ್ದು ಇದು ಜರಿಮಲೆ ಪಾಳೆಯಗಾರರ ನಿರ್ಮಿತಿಯೇ ಆಗಿದೆ.

೧೬ನೇ ಶತಮಾನದಲ್ಲಿ ಕೂಡ್ಲಿಗಿಯಲ್ಲಿ ಪಾಳೆಯಗಾರನು ಅಮರದೇವರಗುಡ್ಡದ ಮೇಲೆ ಅಮರೇಶ್ವರ ದೇವಾಲಯವನ್ನು ಕಟ್ಟಿಸಿದನು. ಈ ದೇವಸ್ಥಾನಕ್ಕೆ ಗರ್ಭಗುಡಿ, ಅಂತರಾಳ ಹಾಗೂ ರಂಗಮಂಟಪಗಳಿವೆ. ಗರ್ಭಗೃಹದಲ್ಲಿ ಈಶ್ವರನ ಲಿಂಗವಿದ್ದು, ಅಂತರಾಳದಲ್ಲಿ ನಂದಿಯ ವಿಗ್ರಹವಿದೆ. ಈತನೇ ಅಮ್ಮನಕೆರೆಯಲ್ಲಿ ಈಶ್ವರನ ದೇವಸ್ಥಾನವನ್ನು ಕಟ್ಟಿಸಿರುವನು. ಇದು ಗರ್ಭಗೃಹ ಹಾಗೂ ಸಭಾಮಂಟಪಗಳನ್ನು ಹೊಂದಿವೆ. ಸಭಾಮಂಟಪದಲ್ಲಿ ನಂದಿ ವಿಗ್ರಹ ಹಾಗೂ ಕಂಬಗಳಿವೆ. ಕಂಬಗಳ ತಳಭಾಗವು ಹಾಗೂ ಮೇಲ್ಭಾಗಗಳು ಚೌಕಾಕಾರವಾಗಿದ್ದು ಮಧ್ಯದಲ್ಲಿ ಬೇಡರ ಕಣ್ಣಪ್ಪ, ನವಿಲು, ಸಿಂಹಾಕೃತಿ, ಕುಂಭ ನಾಗಬಂಧ, ನರ್ತಿಸುತ್ತಿರುವ ಸ್ತ್ರೀ ವಾದ್ಯಗಾರರು ಮೊದಲಾದ ಉಬ್ಬು ಶಿಲ್ಪಗಳಿವೆ. ರಾಮದುರ್ಗದಲ್ಲಿ ೧೭ನೇ ಶತಮಾನದ ಈಶ್ವರ ದೇವಾಲಯ, ಕನ್ನನಾಯಕನ ಕಟ್ಟೆಯಲ್ಲಿಯ ಬಸಪ್ಪನಾಯಕನ ಬಸವಣ್ಣನ ದೇವಾಲಯ, ಕುಪ್ಪಿನಕೆರೆಯ ಆಂಜನೇಯನ ದೇವಸ್ಥಾನ ಕೊಟ್ಟೂರಿನಲ್ಲಿರುವ ವೀರಭದ್ರನ ದೇವಾಲಯಗಳಿವ. ತಂಗಮ್ಮನಹಳ್ಳಿ ಗ್ರಾಮದಲ್ಲಿ ವಿಶೇಷವಾದ ಈಶ್ವರನ ದೇವಾಲಯವಿದೆ. ಇದರಲ್ಲಿ ಗರ್ಭಗೃಹ, ಸಭಾಮಂಟಪ, ದೀಪಸ್ತಂಭಗಳಿವೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಇದರ ಹಿಂದೆ ಮೂರಡಿ ಎತ್ತರದ, ಕೈಗಳಲ್ಲಿ ಬಿಲ್ಲು, ಬಾಣ, ಕತ್ತಿ, ಗುರಾಣಿಗಳನ್ನು ಹಿಡಿದು ಕರ್ಣಕುಂಡಲ, ಕಿರೀಟಗಳನ್ನು ಧರಿಸಿ ಸಮಭಂಗಿಯಲ್ಲಿ ನಿಂತಿರುವ ವೀರಭದ್ರನ ವಿಗ್ರಹವಿದೆ. ಅದರ ಹಿಂದೆ ಕೀರ್ತಿಮುಖ ಹಾಗೂ ಹೂಬಳ್ಳಿಗಳಿಂದ ಅಲಂಕೃತವಾಗಿರುವ ಪ್ರಭಾವಳಿಯಿದೆ. ಸಭಾಮಂಟಪದಲ್ಲಿ ಚೌಕಾಕಾರದ ನಾಲ್ಕು ಕಂಬಗಳಿವೆ. ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವಿದೆ. ಸುತ್ತಲೂ ಗೋಡೆ ಹಾಗೂ ಬುರುಜುಗಳಿವೆ.

ಶಿವಲಿಂಗ ಮತ್ತು ವೀರಭದ್ರನ ವಿಗ್ರಹವಿದ್ದರೂ ಅಲ್ಲಿಯ ಜನರು ಈ ದೇವಾಲಯವನ್ನು ಬಸವೇಶ್ವರನ ದೇವಾಲಯವೆಂದೇ ಕರೆಯುತ್ತಾರೆ. ಕೋಣನ ಹಳ್ಳಿಯಲ್ಲಿ ೧೯ನೇ ಶತಮಾನದ ಆಂಜನೇಯ ಸ್ವಾಮಿಯ ದೇವಾಲಯದ ವಿಶೇಷವೆಂದರೆ ಕೋಣನ ತಲೆಯ ಶಿಲ್ಪವಿದೆ. ನಾಗರ ಪಂಚಮಿಯ ದಿನ ಈ ಗ್ರಾಮದವರಲ್ಲದೆ ಸುತ್ತಮುತ್ತಲಿನ ಗ್ರಾಮದವರೂ ಬಂದು ಪೂಜಿಸುತ್ತಾರೆ.

### ಹಬ್ಬ-ಹರಿದಿನಗಳು

ಇಂದು ಪ್ರಚಲಿತವಿರುವ ಹಬ್ಬಗಳಾದ ಉಗಾದಿ, ಗೌರಿ-ಗಣೇಶನ, ನವರಾತ್ರಿ, ದೀಪಾವಳಿ, ನೂಲಹುಣ್ಣಿಮೆ, ಮಹಾಲಯ ಅಮಾವಾಸ್ಯೆ, ಸಂಕ್ರಾಂತಿ, ಶಿವರಾತ್ರಿ ರಾಮೋತ್ಸವ, ಕೃಷ್ಣಾಷ್ಟಮಿ,

ಹನುಮಜಯಂತಿ ಮುಂತಾದವುಗಳು ಆಗಲೂ ನಡೆಯುತ್ತಿದ್ದವು. ಇವುಗಳ ಜೊತೆಗೆ ವಸಂತೋತ್ಸವ, ಫಾಲ್ಗುಣ ಮಾಸದ ಉತ್ಸವ, ರಥೋತ್ಸವ, ವೈಶಾಖ ಮಾಸದ ರಥೋತ್ಸವ, ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ ಮುಂತಾದ ಉತ್ಸವಗಳನ್ನು ಆಚರಿಸುತ್ತಿದ್ದರು. ಪಾಳೆಯಗಾರರು ಯುದ್ಧ ಮಾಡಬೇಕಾಗುತ್ತಿದ್ದುದರಿಂದ ಮತ್ತು ವೀರರಾದ್ದರಿಂದ ಶಕ್ತಿಪೂಜೆಯನ್ನು ಆಚರಿಸುತ್ತಿದ್ದರು. ಈಗಿನಂತೆ ಎಲ್ಲಾ ಹಬ್ಬಗಳನ್ನು ಆಚರಿಸುತ್ತಿದ್ದರು. ನಾಗರಪಂಚಮಿಯಂದು ಸೊಸೆಯರು ಹಾವಿಗೆ ಹಾಲೆರೆಯುತ್ತಿದ್ದರು. ನವರಾತ್ರಿಯಲ್ಲಿ ವಿಜಯದಶಮಿಯಂದು ಆಂಜನೇಯನ ಪೂಜೆ ಮಾಡಿ, ಅಗ್ನಿ ಹಾಯುತ್ತಿದ್ದರು. ಅಥವಾ ಕೆಂಡ ತುಳಿಯುತ್ತಿದ್ದರು. ಸಂಜೆ ಬನ್ನಿಪತ್ರೆಯನ್ನು ಹಿರಿಯರಿಗೆ ಇತ್ತು ಅವರಿಂದ ಆಶೀರ್ವಾದ ಪಡೆಯುತ್ತಿದ್ದರು. ಶ್ರಾವಣ ಅಮವಾಸ್ಯೆ ಆದ ಮೇಲೆ ನಲವತ್ತೊಂದು ದಿವಸ ಅಶ್ವತ್ಥ ಪೂಜೆ ಮಾಡುತ್ತಿದ್ದರು. ದೀಪಾವಳಿ ಹಬ್ಬವೆಂದರೆ ಒಂದೇ ದಿನ ಅದು ಕಾರ್ತೀಕ ಹುಣ್ಣಿಮೆ. ಆದಿನ ಕುಂಭ ಪೂಜೆ ಎಂದು ಕರೆಯುವರು. ಅದು ಸತ್ತವರಿಗಾಗಿ ಮಾಡುವ ಪೂಜೆ. ಯುಗಾದಿ ಮಾತ್ರ ಮೂರು ದಿನ ನಡೆಸುತ್ತಿದ್ದರು. ಮೂರು ನಾಲ್ಕು ವರ್ಷಕ್ಕೊಮ್ಮೆ ಮಾರಮ್ಮನ ಜಾತ್ರೆಯನ್ನು ಮೂರು ದಿನ ಆಚರಿಸುತ್ತಿದ್ದರು. ಆಗ ದೇವಸ್ಥಾನದಲ್ಲಿ ಮತ್ತು ಬ್ರಾಹ್ಮಣರ ಪೂಜೆ ನಡೆಯುತ್ತದೆ. ಗಣಪತಿ ಹಬ್ಬದಂದು ಇಲಿಗೆ ಎಡೆ ಇಡುತ್ತಿದ್ದರು.

ಈ ಪ್ರದೇಶಗಳಲ್ಲಿ ದೇವರುಗಳ ವಿಶೇಷ ಪೂಜೆಯಂದು ಜಾತ್ರೆ ನಡೆದು, ಜಾತಿಗಳ ಭೇದವಿಲ್ಲದೆ ಪ್ರತಿಯೊಬ್ಬ ವ್ಯಕ್ತಿಯೂ ಭಕ್ತಿ ಭಾವದಿಂದ ಭಾಗವಹಿಸುತ್ತಿದ್ದನು. ಆಗ ಕುಸ್ತಿ, ಖಡ್ಗ ವಿದ್ಯೆ ಮುಂತಾದ ಶೌರ್ಯ ಪ್ರದರ್ಶನ ನಡೆಯುತ್ತಿತ್ತು. ಗೆದ್ದವರಿಗೆ ಪಾಳೆಯಗಾರರು ಬಹುಮಾನ ಕೊಟ್ಟು ಪ್ರೋತ್ಸಾಹಿಸಿ ಮರ್ಯಾದೆ ಮಾಡುತ್ತಿದ್ದರು. ಗೆದ್ದವರ ಮೇಲೆ ನಿಗವಿಟ್ಟು ಮುಂದೆ ಅವರನ್ನು ತಮ್ಮ ಸೈನ್ಯದಲ್ಲಿ ಸೇರಿಸಿಕೊಳ್ಳುತ್ತಿದ್ದರು. ಭಕ್ತವೃಂದವು ಬಲಿಸೇವೆ, ಗುಗ್ಗರಿ ಸೇವೆ, ಅಗ್ನಿಸೇವೆ, ನೆಡಿ, ಗಾವುನೆಗಿಯುವುದು, ಬಾಯಿಗೆ ಬೀಗ ಹಾಕಿಸಿಕೊಳ್ಳುವುದು ಮೊದಲಾದ ನಾನಾ ರೀತಿಯ ಸೇವೆಗಳನ್ನು ಆಚರಿಸುತ್ತಾರೆ.

ನಾಟಕ, ಬಯಲಾಟ, ನೃತ್ಯ, ಸಂಗೀತ, ಲಾವಣಿ ಮುಂತಾದ ಜಾನಪದ ಕಲೆಗಳೂ ನಡೆಯುತ್ತವೆ. ಇಲ್ಲಿ ವ್ಯಾಪಾರದ ಅಭಿವೃದ್ಧಿಯೂ ಆಗುತ್ತದೆ. ಬೇರೆ ಬೇರೆ ಕಡೆಗಳಿಂದ ವ್ಯಾಪಾರಿಗಳು ಒಂದು ತಿಂಗಳ ಮೊದಲೇ ವಸ್ತುಗಳನ್ನು ತಂದು ಶೇಖರಿಸಿಕೊಂಡು ವ್ಯಾಪಾರ ಮಾಡುತ್ತಾರೆ. ಬಲಿಗಾಗಿ ಎಮ್ಮೆ, ಕುರಿ, ಮೇಕೆ, ಕೋಳಿಗಳ ಸಂತೆಯೂ ಏರ್ಪಟ್ಟಿರುತ್ತದೆ. ಹೀಗೆ ಹಬ್ಬ ಹರಿದಿನಗಳನ್ನು ಉಲ್ಲಾಸದಿಂದ, ಆನಂದದಿಂದ, ಯಾವ ರಾಗದ್ವೇಷ–ಅಸೂಯೆಗಳಿಲ್ಲದೆ ಜನರು ಆಗಿನ ಕಾಲದಲ್ಲಿ ಆಚರಿಸುತ್ತಿದ್ದರು.

ಜರಿಮಲೆ ಪಾಳೆಯಗಾರರು ಸಂಗೀತ ಹಾಗೂ ನೃತ್ಯಗಳಂತಹ ಕಲೆಗಳಿಗೂ ಬಹಳ ಪ್ರೋತ್ಸಾಹ ಕೊಡುತ್ತಿದ್ದರು. ಇವುಗಳ ಜೊತೆಗೆ ವಾದ್ಯಗಳ ಮೇಳಗಳಿಗೂ ಪ್ರೋತ್ಸಾಹ ಸಿಗುತ್ತಿತ್ತು. ಪ್ರಕೃತಿಯ ಮಡಲಿನಲ್ಲಿಯೇ ಬೆಳೆದು, ರಾತ್ರಿ–ಹಗಲೂ ಪ್ರಕೃತಿಯನ್ನು ವೀಕ್ಷಿಸುತ್ತಿದ್ದ ಗ್ರಾಮೀಣ

ಜನರಿಗೆ ಅಪರೋಕ್ಷವಾಗಿ ಈ ಕಲೆಗಳು ಬೆಳೆದುಬಂದವು. ಬೀಳುವಾಗ, ಕುಟ್ಟುವಾಗ, ದನಗಳ ಕೊರಳ ಗಂಟೆಗಳ ಗೆಜ್ಜೆಯ ಧ್ವನಿಯಾದಾಗ, ಹಕ್ಕಿ ಹಾಡಿದಾಗ, ಸಿಡಿ ಹರಿಯುವ ಧ್ವನಿಗಳನ್ನು ಅನುಸರಿಸಿ ಹಾಡತೊಡಗಿದರು. ನಿಧಾನವಾಗಿ ಈ ಕಲೆಗಳ ಬೆಳೆದು, ಜನರು ಪ್ರೋತ್ಸಾಹಗೊಂಡರು ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲು ಪ್ರಯತ್ನಪಟ್ಟರು. ಕೋಲಾಟ, ತಮಟೆ ಕುಣಿತ, ಡೊಳ್ಳು ಕುಣಿತ, ಪಾಳೆಗಾರ ಕುಣಿತ, ಸೋಮನ ಕುಣಿತ, ಕಹಳೆ ಊದುವುದು, ನಂದಿಧ್ವಜ ಕುಣಿತ, ದಾಸಯ್ಯ ಕುಣಿತ, ಬಯಲಾಟ, ಭಜನೆ, ಹುಲಿವೇಷ, ಲಂಬಾಣಿ ನೃತ್ಯ, ಮಳೆರಾಯ, ಚಿಟುಗುಬ್ಬಿ, ವೀರಗಾಸೆ, ಕಂಸಾಳೆ, ಕರಪಾಲ ಮಜಲು, ಗೊರವರ ಕುಣಿತ, ಗೊಂದಲಿಗರ ಕುಣಿತ, ವಟುಕುಣಿತ, ಹೆಜ್ಜೆ ಮೇಳ, ಚೌಡಿಕೆ, ಹುತ್ತರಿ, ತೊಗಲು ಬೊಂಬೆ, ಪುರವಂತಿಗೆ, ತಾಳ, ಮದ್ದಳೆ, ಭೂತದ ಸೇವೆ, ಹಲಗೆ ಕುಣಿತ, ಕರಗ, ಸೂತ್ರದ ಬೊಂಬೆ ಕುಣಿತ, ಅಲಾಯಿಹೆಜ್ಜೆ, ಕೊಡದ ಕುಣಿತ, ಭಾಗಂತಿಗೆ, ಗೀಗೀ ಮೇಳ, ಪಂಜಿನ ಕುಣಿತ, ರಂಗದ ಕುಣಿತ, ಒಂದೇ ಎರಡೇ ಅನೇಕವಿದೆ. ಹೀಗೆ ಅನೇಕ ಜನಪದ ಕಲೆಗಳು ಹುಟ್ಟಿಕೊಂಡವು. ಇವುಗಳ ಜೊತೆಗೆ ಲಾವಣಿ ಹಾಡುವುದು, ವೀರಕಥೆಯನ್ನು ಹಾಡುವುದು ಮುಂತಾದವು ಹಬ್ಬ-ಹರಿದಿನಗಳಲ್ಲಿ ಆಡುತ್ತಿದ್ದರು.

ವರ್ಷಕ್ಕೊಮ್ಮೆ ದೇವರ ಹೆಸರಿನಲ್ಲಿ ಜಾತ್ರೆ ಮಾಡಿ, ಎಲ್ಲರೂ ಸೇರಿ ಸುಖ ಸಂತೋಷ, ಆನಂದದಲ್ಲಿರುವಾಗ ತಮ್ಮ ಕಲೆಗಳನ್ನು ಪ್ರದರ್ಶಿಸುತ್ತಿದ್ದರು. ಈಗಲೂ ಈ ಸಂಪ್ರದಾಯ ನಡೆದುಬಂದಿದೆ. ಹೆಂಗಸರು ಕೂಡ, ವೇಳೆ ದೊರೆತಾಗ ತಮ್ಮ ಕೈ ಕುಶಲತೆಯನ್ನು ಪ್ರದರ್ಶಿಸಿ, ನಮ್ಮ ಸಂಸ್ಕೃತಿ ನಿರಂತರವಾಗಿ ಹರಿಯುವಂತೆ ಸಹಾಯ ಮಾಡಿದ್ದಾರೆ. ಮೇಲೆ ಹೇಳಿರುವ ಕಲೆಗಳಲ್ಲಿ ಎಷ್ಟೋ ಕಲೆಗಳ ಹೆಸರು ಮಾತ್ರ ಉಳಿದುಕೊಂಡು ಅವುಗಳನ್ನು ಹೇಗೆ, ಯಾವಾಗ ಆಡುತ್ತಾರೆ ಎಂಬುದು ತಿಳಿದಿಲ್ಲ. ಇನ್ನು ಅನೇಕ ಜನಪದ ಕಲೆಗಳು ಇವತ್ತಿಗೂ ಜೀವಂತವಾಗಿವೆ.

### ಪಾಳೆಯಗಾರರ ಕುಣಿತ

ಪಾಳೆಯಗಾರನ ವೇಷವನ್ನು ಧರಿಸಿದವನು, ಶರೀರಕ್ಕೆ ಬಿಗಿಯಾಗಿ ಕಾಚಾ ಕಟ್ಟಿಕೊಂಡು, ದೊಡ್ಡ ಭಾರಿ ಮೀಸೆಯನ್ನು ತಗುಲಿಸಿಕೊಂಡು ಮುಖಕ್ಕೆ ವಿವಿಧ ಬಣ್ಣಗಳನ್ನು ಬಳಿದುಕೊಂಡು, ತೋಳು-ಸೊಂಟಗಳಿಗೆ ಹಗ್ಗ ಕಟ್ಟಿಕೊಂಡು ಒಂದು ಕೈಯಲ್ಲಿ ಕತ್ತಿ, ಮತ್ತೊಂದರಲ್ಲಿ ಗುರಾಣಿ, ಬಾಯಲ್ಲಿ ನಿಂಬೆಹಣ್ಣನ್ನು ಕಚ್ಚಿಕೊಂಡು ಗತ್ತಿನಿಂದ ಕುಣಿಯುತ್ತ, ಸೊಂಟಕ್ಕೆ ಕಟ್ಟಿದ ಹಗ್ಗವನ್ನು ಹಿಡಿದವರನ್ನು ಎಳೆಯುತ್ತ ಕುಣಿಯುತ್ತಾನೆ. ಇವನ ನಡಿಗೆ, ಕುಣಿತ ರಾಜಠೀವಿಯಲ್ಲಿರುತ್ತದೆ. ಗ್ರಾಮದೇವತೆಯ ಜಾತ್ರೆಯಲ್ಲಿ 'ಸಿಡಿ' ಆಡುವ ಕಾರ್ಯಕ್ರಮವಿರುತ್ತದೆ. ಹರಕೆ ಹೊತ್ತ ಭಕ್ತರನ್ನು ಸಿಡಿ ಕಂಬಕ್ಕೆ ತರುವ ಕೆಲಸ ಸೋಮಗಳದು.

### ನಂದೀಧ್ವಜ ಕುಣಿತ

ನಂದೀಧ್ವಜ ಶಿವನ ಲಾಂಛನವಾದ್ದರಿಂದ ಶೈವ ದೇವಾಲಯಗಳಲ್ಲಿ ನಂದೀಕಂಬವಿರುತ್ತದೆ. ಶೈವ ದೇವಾಲಯದ ಉತ್ಸವಗಳಲ್ಲಿ ನಂದಿಧ್ವಜದ ಕುಣಿತವನ್ನು ಜಾತ್ರೆಗಳಲ್ಲಿ, ಹಬ್ಬ ಹರಿದಿನಗಳಲ್ಲಿ

ಆಚರಿಸುತ್ತಾರೆ. ಇದು ಒಂದು ಗಂಡುಕಲೆ, ನಂದೀಧ್ವಜವು ಸುಮಾರು ೩೦,೪೦ ಅಡಿ ಉದ್ದವಿರುವ ಬಿದುರಿನ ಕಂಬವಿದ್ದು ಅದರ ಕಲೆಯನ್ನು ಹಿತ್ತಾಳೆಯ ಹಂಡೆ, ಕೊಳಗದಂತ ವಸ್ತುವನ್ನು ಅಳವಡಿಸಿ ಗಗ್ಗರಗಳ ಆಭರಣಗಳನ್ನು ಹಾಕಿರುತ್ತಾರೆ. ಅದರ ಮೇಲೆ ಬಿಳಿಯ ಛತ್ರಿ ಮತ್ತು ರೇಶಿಮೆಯ ನಂದಿ ವಸ್ತ್ರವಿರುತ್ತದೆ. ಕೆಳಗೆ ಕಂಬವನ್ನು ಹಿಡಿಯುವ ಜಾಗದಲ್ಲಿ ಹಲಗೆಯ ಮೆಲೆ ಬೆಳ್ಳಿಯ ಅಥವಾ ಹಿತ್ತಾಳೆಯ ನಂದೀಮೂರ್ತಿ ಇರುತ್ತದೆ. ನಂದೀಧ್ವಜದ ಕಂಬವನ್ನು ೧೮ ಮೊಳವಾಗಿ ವಿಂಗಡಿಸಿರುತ್ತದೆ. ಈ ಹದಿನೆಂಟು ಮೊಳ, ಹದಿನೆಂಟು ಜನಾಂಗಗಳ ಪ್ರತೀಕ ಹರಡೆಗಳೂ ಹದಿನೆಂಟಿರುತ್ತದೆ. ಈ ಕಂಬವನ್ನು ಹದಿನೆಂಟು ಮೊಳದ ರೇಶಿಮೆ ಅಥವಾ ಕಾವಿ ಬಣ್ಣದ ಬಟ್ಟೆಯಿಂದ ಸುತ್ತಿರುತ್ತಾರೆ. ಇಷ್ಟನ್ನು ಹೊಂದಿದ ನಂದೀಧ್ವಜದ ಭಾರದ ಅಳತೆಯನ್ನು ಮಾಡುವುದು ಕಷ್ಟ, ಇದನ್ನು ಸಮತೂಕದಲ್ಲಿ ಹಿಡಿದು ಕುಣಿಯುವವನಿಗೆ ಶಕ್ತಿ–ಯುಕ್ತಿ ಎರಡೂ ಇರಬೇಕು. ಈತನು ಸೊಂಟಕ್ಕೆ 'ಹಸಿಬೆ'ಯನ್ನು ಎಂದರೆ ಚೀಲದಂತಿರುವ ಸೊಂಟಪಟ್ಟಿಯನ್ನು ಕಟ್ಟಿಕೊಂಡು ಧ್ವಜಕಂಬದ ಕೊನೆಯನ್ನು ಅದರೊಳಗೆ ಸಿಕ್ಕಿಸಿಕೊಂಡು ಇರುತ್ತಾನೆ.

ಕರಡಿಮಜಲು, ಚಮ್ಮಾಳ, ಸನಾಯಿ, ಮುಂತಾದ ವಾದ್ಯಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತ ಕುಣಿಯುತ್ತಾನೆ. ಹೀಗೆ ಕುಣಿಯುವಾಗ ಒಂದು ಕೈಯಲ್ಲಿ ಹಿಡಿದು, ಹಣೆಯ ಮೇಲೆ ಹೊತ್ತು ಹೆಗಲ ಮೇಲೆ ನಿಲ್ಲಿಸಿಕೊಂಡು ಅಥವಾ ಧ್ವಜವನ್ನು ಹಿಡಿದು ಮತ್ತೊಬ್ಬರನ್ನು ಹೆಗಲ ಮೇಲೆ ಹೊತ್ತು ತನ್ನ ಕುಣಿತದ ಪ್ರತಿಭೆಯನ್ನು, ಶಕ್ತಿಯನ್ನು, ಯುಕ್ತಿಯನ್ನು ಪ್ರದರ್ಶಿಸುತ್ತಾನೆ. ಈ ಕುಣಿತದ ಜೊತೆಗೆ ವೀರಭದ್ರ ಕುಣಿತವು ಸೇರುತ್ತದೆ.

### ಜರಿಮಲೆ ಪಾಳೆಯಗಾರರ ಕೋಟೆಯ ಲಕ್ಷಣ

ಕೋಟೆಗಳು ನಮ್ಮ ಪ್ರಾಚೀನ ಅರಸರ ರಕ್ಷಣೆಗಾಗಿ ನಿರ್ಮಿತವಾದ ಅತ್ಯಾವಶ್ಯಕವಾದ ನಿರ್ಮಾಣಗಳಾಗಿವೆ. ರಕ್ಷಣೆಯ ದೃಷ್ಟಿಯಿಂದ ಕೋಟೆಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಕೋಟೆಯನ್ನು ನಮ್ಮ ಪ್ರಾಚೀನರು ಗಿರಿದುರ್ಗ, ಜಲದುರ್ಗ, ವನದುರ್ಗ ಎಂದು ವಿಭಾಗಿಸುತ್ತಾರೆ. ನಮ್ಮ ಅಧ್ಯಯನ ಪ್ರದೇಶದಲ್ಲಿ ಗಿರಿದುರ್ಗಗಳು ಮಾತ್ರ ಕಂಡುಬರುತ್ತವೆ. ಈ ಅಧ್ಯಾಯದಲ್ಲಿ ಅವುಗಳನ್ನು ಚರ್ಚಿಸಲಾಗಿದೆ. ಕೂಡ್ಲಿಗಿ ತಾಲೂಕಿನಲ್ಲಿ ಚಾರಿತ್ರಿಕ ಮಹತ್ವ ಪಡೆದ ಗ್ರಾಮಗಳ ಪೈಕಿ ಜರಿಮಲೆಯು ಒಂದು. ಇದು ಕೂಡ್ಲಿಗಿಯಿಂದ ಆಗ್ನೇಯಕ್ಕೆ ೧೫ ಕಿ.ಮೀ. ದೂರದಲ್ಲಿದೆ. ಪುಟ್ಟ ಗ್ರಾಮವಾಗಿರುವ ಜರಿಮಲೆ ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದಿತು. ವಿಜಯನಗರದ ತರುವಾಯ ಈ ಪ್ರದೇಶವನ್ನು ಸ್ಥಳೀಯ ಬೇಡ ನಾಯಕರು, ರಾಜ್ಯ ಸ್ಥಾಪಿಸಿ ಆಳತೊಡಗಿದರು. ಗುಡೇಕೋಟೆ, ಹರಪನಹಳ್ಳಿ, ಚಿತ್ರದುರ್ಗ ಪಾಳೆಯಗಾರರಂತೆ ಜರಿಮಲೆಯವರು ಆಳ್ವಿಕೆ ನಡೆಸಿದ್ದು ಸ್ಮರಣೀಯ.

ಜರಿಮಲೆ ಇಂದಿನ ಸ್ಥಿತಿ ತೃಪ್ತಿಕರವಾಗಿಲ್ಲ. ಇಲ್ಲಿಯ ಬೆಟ್ಟವನ್ನು ವರಿಸಿದ್ದ ಸುಮಾರು ೩ ಸುತ್ತಿನ ಕೋಟೆಯ ಇಂದು ಸಂಪೂರ್ಣ ನಾಶವಾಗಿ ಹೋಗಿದೆ. ಕೋಟೆಯಲ್ಲಿ ಇನ್ನೂ ಕೆಲವು

ಸ್ಮಾರಕಗಳು, ಕಲ್ಲು, ಕಟ್ಟಡಗಳು, ಉಳಿದುಕೊಂಡು ಬಂದಿವೆ. ಮುಖ್ಯವಾಗಿ ಈ ಕೋಟೆಯು ನಾಲ್ಕು ಮೂಲೆಯ (ನಾಲ್ಕು ದಿಕ್ಕಿಗೂ ಇರುವ) ಗುಡ್ಡಗಳನ್ನು ಬಳಸಿಕೊಂಡು ನಿರ್ಮಾಣವಾದಂತಹದು. ಈ ಗುಡ್ಡಗಳನ್ನು ಪಾರಿವಾಳ ಗುಂಡುಗಳು (ಗುಡ್ಡದ ಹೆಸರು) ಎಂದು ಹೆಸರು. ಈ ಕೋಟೆಯ ಮಠದ ಹತ್ತಿರದ ಮೊದಲನೆಯ ಬಾಗಿಲನ್ನು ಊರು ಬಾಗಿಲೆನ್ನುವರು. ಕೋತಿ ಗುಂಡಿನ ಹತ್ತಿರವಿರುವ ಬಾಗಿಲನ್ನೂ ಊರು ಬಾಗಿಲೆನ್ನಲಾಗುತ್ತದೆ. ದಿವಾನರ (ಅಥವಾ ರಾಜರ) ತೋಟದ ಹತ್ತಿರದ ಬಾಗಿಲನ್ನು.

ಈ ಕೋಟೆಯು ಗಿರಿದುರ್ಗಗಳ ಸಾಲಿಗೆ ಸೇರುತ್ತದೆ. ಬೆಟ್ಟವನ್ನು ಬಳಸಿಕೊಂಡು ಹಾಸುಬಂಡೆಯನ್ನು ತಳಪಾಯವಾಗಿಸಿಕೊಂಡು ಕೋಟೆಯನ್ನು ಕಟ್ಟಲಾಗಿದೆ. ಕೆಲವು ಕಡೆ ಪ್ರಕೃತಿ ನಿಯಮಿತ ಬಂಡೆಗಳೇ ಕೋಟೆಯ ಗೋಡೆಗಳಾಗಿವೆ. ಬೆಟ್ಟದ ತುದಿಯನ್ನು ಶತ್ರುಗಳು ಪ್ರವೇಶ ಮಾಡದಂತೆ ಪ್ರವೇಶದ್ವಾರವನ್ನು ನಿರ್ಮಿಸಲಾಗಿದೆ. ಕೋಟೆಯ ಗೋಡೆಯು ಹತ್ತು ಅಡಿ ಎತ್ತರವಾಗಿದ್ದು ಕೆಲವು ಕಡೆ ತಾರತಮ್ಯವಿದೆ. ಅಗಲ ಸು. ೨ ರಿಂದ ೩ ಅಡಿ ಇದ್ದು ಕೆಲವು ಕಡೆ ಹೆಚ್ಚು ಕಡಿಮೆ ಇದೆ. ಕೋಟೆಯನ್ನು ಗೋಡೆ ನಿರ್ಮಿಸಲು ಆಯತಾಕಾರದ ಕಲ್ಲುಗಳನ್ನು ತಳಪಾಯಕ್ಕೆ ಬಳಸಿದ್ದಾರೆ. ಮೇಲ್ಭಾಗದಲ್ಲಿ ಮಧ್ಯಮಗಾತ್ರದ ಕಲ್ಲುಗಳನ್ನು ಉಪಯೋಗಿಸಿದ್ದಾರೆ. ಮೇಲ್ತುದಿಯಲ್ಲಿ ಗಾರೆಯ ಲೇಪನ ಮಾಡಲಾಗಿದೆ. ಈ ಕೋಟೆಯನ್ನು ಮೂರು ಪ್ರದೇಶದಲ್ಲಿ ನಿರ್ಮಿಸಿದ್ದಾರೆ. ಒಟ್ಟು ೩೦ ಕೊತ್ತಗಳಿವೆ. ಇವನ್ನು ಕೋಟೆಯ ಆಯಾಕಟ್ಟಿನ ಸ್ಥಳಗಳಲ್ಲಿ ಶಾಸ್ತ್ರಾಸ್ತ್ರಗಳ ಸಹಿತ ಮೇಲೇರಲು ಅನುಕೂಲವಾಗುವಂತೆ ಚೌಕಾಕಾರದ ಮತ್ತು ವೃತ್ತಾಕಾರದಲ್ಲಿ ನಿರ್ಮಿಸಲಾಗಿದೆ. ಶತ್ರುಗಳ ಬರುವಿಕೆಯನ್ನು ಗಮನಿಸಲು ಕೋಟೆಯ ಗೋಡೆಗಿಂತ ಎತ್ತರವಾಗಿ ಚೌಕಾಕಾರವಾಗಿ, ವೃತ್ತಾಕಾರವಾಗಿ ಗೋಡೆಗೆ ಅಂಟಿಕೊಂಡಂತೆ ಕೊತ್ತಳವನ್ನು ಕಟ್ಟಲಾಗಿ ಬಂದೂಕು ಕಿಂಡಿಗಳನ್ನು ಅಳವಡಿಸಲಾಗಿದೆ.

ಈ ಕೋಟೆಯ ಹಲವು ಸುತ್ತುಗಳನ್ನು ಹೊಂದಿತ್ತಾದರೂ ಈಗ ಅಳಿದುಳಿದ ಒಂದೇ ಸುತ್ತು ಗೋಚರಿಸುತ್ತದೆ. ಕೋಟೆಗೆ ಮೂರು ಪ್ರವೇಶದ್ವಾರಗಳಿದ್ದು ಹೊರಕೋಟೆಯ ಪ್ರವೇಶದ್ವಾರವು ಪಶ್ಚಿಮ ದಿಕ್ಕಿನ ಗೋಡೆಯಲ್ಲಿದೆ. ಬಾಗಿಲುವಾಡಗಳು ನಾಶವಾಗಿವೆ. ಈ ಪ್ರವೇಶ ದ್ವಾರಕ್ಕೆ ಬರುವ ಮೊದಲು ಬಸವೇಶ್ವರ ದೇವಾಲಯ ಸಿಗುವುದು. ಇಲ್ಲಿಂದ ಪ್ರವೇಶದ್ವಾರದ ಮೂಲಕ ಒಳಸಾಗಿದರೆ ಮೊದಲು ಸಿಗುವುದೇ ಅರಮನೆ. ಆದರೆ ಈಗ ಅರಮನೆಯ ತಲಪಾಯ ಗೋಡೆಗಳು ಮಾತ್ರ ಉಳಿದುಕೊಂಡಿವೆ. ಇಲ್ಲಿಂದ ಸ್ವಲ್ಪ ದೂರ ಈಶಾನ್ಯ ದಿಕ್ಕಿಗೆ ಹೋದರೆ ಬೃಹತ್ ಬಂಡೆಯ ಮೇಲೆ ಕೆತ್ತಿದ ಆಂಜನೇಯ ಶಿಲ್ಪವಿದ್ದು, ಅದು ಎತ್ತರವಿದೆ. ಈ ಪ್ರದೇಶದಲ್ಲಿ ನೀರಿನ ಹೊಂಡ, ಬಾವಿಗಳು ಹಾಗೂ ಗರಡಿ ಮನೆಗಳಿವೆ. ಇವುಗಳನ್ನು ದಾಟಿಕೊಂಡು ಪಶ್ಚಿಮ ದಿಕ್ಕಿನಿಂದ ಈಶಾನ್ಯದೆಡೆಗೆ ಹೋಗಲು ಬಾಗಿಲನ್ನು ಜೋಡಿಸಲಾಗಿದೆ. ಈ ಬಾಗಿಲು ಜರಿಮಲೆ ಗ್ರಾಮದಿಂದ ಕೋಟೆಗೆ ನೇರ ಪ್ರವೇಶ ಕೊಡುತ್ತದೆ. ಈ ಬಾಗಿಲು ಸುಮಾರು ೨೦ ಅಡಿ ಎತ್ತರ ೧೦ ಅಡಿ ಅಗಲವಿದೆ. ಒಳ ಹಿಂಬದಿ ಭಾಗಕ್ಕೆ ಇಕ್ಕೆಲಗಳಲ್ಲಿ

ಮಂಟಪಗಳಿವೆ. ಲಲಾಟಬಿಂಬದಲ್ಲಿ ಗಣೇಶನ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಬಾಗಿಲು ತೋಳುಗಳ ಮೇಲ್ತುದಿಗಳಲ್ಲಿ ಇಳಿಬಿದ್ದ ಪದ್ಮದ ಮೊಗ್ಗುಗಳಿವೆ. ಈ ಬಾಗಿಲು ಮೂಲಕ ಒಳಪ್ರವೇಶಿಸಿದಾಗ ಕಾಣುವುದೇ ಆನೆಹೊಂಡ ಪಾಳೆಯಗಾರರು ಇಲ್ಲಿ ಆನೆಗಳ ಸ್ನಾನ ಮಾಡುಸುತ್ತಿದ್ದರೆಂದು ಈಗಲೂ ಜನ ಹೇಳುತ್ತಾರೆ. (ನಂಬುತ್ತಾರೆ) ಹೊಂಡದ ಪೂರ್ವಕ್ಕೆ ರಾಗಿಕಣಜವಿದೆ. ಇಲ್ಲಿಂದ ಬೆಟ್ಟದ ಮೇಲೆ ಹೋಗಲು ಕಲ್ಲುಹಾಸಿನ ದಾರಿಯಿದೆ.

ಬೆಟ್ಟದ ತುದಿಯಲ್ಲಿ ವಾಸದ ಮನೆಗಳು ಕಣಜಗಳು, ನೀರಿನ ಹೊಂಡಗಳು ಇವೆ. ಬಹುಶಃ ಇವು ಪ್ರಮುಖ ಅಧಿಕಾರಿಗಳ ಮನೆಗಳಿದ್ದಿರಬಹುದು, ಕೋಟೆಯ ಸುತ್ತಲೂ ದಟ್ಟವಾದ ಕಾಡು ಪೂರ್ವಕ್ಕೆ ಬೆಟ್ಟಗುಡ್ಡಗಳ ಸಾಲುಗಳಿವೆ. ಹಾಗಾಗಿ ಜರಿಮಲೆ ಪಾಳೆಯಗಾರರು ಕೋಟೆ ಕಟ್ಟಲು ಈ ಪ್ರದೇಶವನ್ನು ಆರಿಸಿಕೊಂಡಿರಬೇಕು. ಇಷ್ಟೆಲ್ಲ ನೈಸರ್ಗಿಕ ರಕ್ಷಣೆ ಪಡೆದು ಕೋಟೆ ಕಟ್ಟಿದರು ಕೂಡ ಇವರ ರಾಜಕೀಯ ಅಸ್ಥಿರತೆಯಿಂದ ಬಲಾಢ್ಯ ರಾಜರುಗಳಾದ ನಿಜಾಮ, ಮರಾಠರು, ಮೈಸೂರು ಅರಸರು, ಚಿತ್ರದುರ್ಗ, ಹರಪನಹಳ್ಳಿ ಪಾಳೆಯಗಾರರು ಪದೇ ಪದೇ ಆಕ್ರಮಣ ಮಾಡುತ್ತಿದ್ದರು. ಅಂತಹ ಕ್ಲಿಷ್ಟ ಪರಿಸ್ಥಿತಿಯಲ್ಲೂ ಅವರು ತಮ್ಮ ಕುರುಹುಗಳಾಗಿ ಅರಮನೆ, ಕೋಟೆ, ಕಣಜ, ನೀರಿನ ಹೊಂಡಗಳಂತಹ ಸ್ಮಾರಕಗಳನ್ನು ಕಟ್ಟಿಕೊಂಡಿದ್ದಾರೆ. ಅವುಗಳ ಅಳಿದುಳಿದ ಅವಶೇಷಗಳನ್ನು ನಾವಿಂದು ಕಾಣಬಹುದು.

### ತೊಟ್ಟಿಲು ಬಾವಿ

ಇದನ್ನು ಬಿಸಿಲಬಾವಿ ಎಂದು ಸಹ ಕರೆಯುತ್ತಾರೆ. ಇದು ತೊಟ್ಟಿಲಾಕಾರದಲ್ಲಿ ಇರುವುದರಿಂದ ತೊಟ್ಟಿಲ ಬಾವಿಯೆಂದು ಇದರ ಮೇಲೆ ಬೃಹದಾಕಾರದ ಬಂಡೆಗಳಿರುವುದರಿಂದ ಬಿಸಿಲು ಬೀಳುವುದರಿಂದ ಇದನ್ನು ಬಿಸಿಲ ಬಾವಿಯೆಂದು ಕರೆಯುತ್ತಾರೆ. ಬಂಡೆಗಳ ಮೇಲ್ಭಾಗದಲ್ಲಿ ಕಲ್ಲಾಸರೆಯ ರೇಖಾಚಿತ್ರಗಳಿವೆ. ಅಲ್ಲದೆ ಸೈನಿಕರ ವಸತಿಗಳ ಪಕ್ಕದಲ್ಲಿ ಇರುವುದರಿಂದ ಸೈನಿಕರಿಗೆ ಕುಡಿಯಲು ತಣ್ಣೀರನ್ನು ಒದಗಿಸುತ್ತಿದೆಂದು ಹೇಳಲಾಗಿದೆ.

### ಓಕಳಿಹೊಂಡ

ಇದಕ್ಕೆ ಹೊಂದಿಕೊಂಡಂತೆ ತಣ್ಣೀರಿನ ಮತ್ತು ಉಸುಕಿನ ಹೊಂಡಗಳು ಅರಮನೆಯ ಬಳಿ ಆಂಜನೇಯ ದೇವಾಲಯದ ಮುಂಭಾಗದಲ್ಲಿ ಇವು ಅರಮನೆಗೆ ನೀರಿನ ಪೂರೈಕೆಗಾಗಿ ಇದ್ದಿರಬಹುದು. ಓಕಳಿಹೊಂಡ ದೇವತಾಕಾರ್ಯಗಳಿಗೆ ಉಪಯೋಗವಾಗುತ್ತಿತ್ತೆಂದು ತೋರುತ್ತದೆ. ಜೊತೆಗೆ ಯುಗಾದಿ ಹಬ್ಬದ ಸಂದರ್ಭದಲ್ಲಿ ಮನರಂಜನಾ ಕ್ರೀಡೆಗಳು ನಡೆಯುತ್ತಿದ್ದವು. ಓಕುಳಿ ಆಡುವುದು ಪ್ರಮುಖವಾದ ಮನರಂಜನೆಯಾಗಿತ್ತೆನ್ನುವುದಕ್ಕೆ ಆ ಸಂಪ್ರದಾಯ ಇಂದಿಗೂ ಉಳಿದಿದೆ.

**ರಾಗಿಕಣಜ**

ಈ ಕಣಜದಲ್ಲಿ ರಾಗಿಯನ್ನು ಸಂಗ್ರಹಿಸಿ ಇಡಲಾಗುತ್ತಿತ್ತು. ಆದ್ದರಿಂದ ಇದಕ್ಕೆ ರಾಗಿ ಕಣಜ ಎಂದು ಕರೆಯುತ್ತಾರೆ. ಈ ಪ್ರದೇಶದಲ್ಲಿ ರಾಗಿ ಬೆಳೆಯಲು ಯೋಗ್ಯ ಭೂಮಿ ಇರುವುದರಿಂದ ಬೆಳೆದ ರಾಗಿಯನ್ನು ಈ ಕಣಜ (ಉಗ್ರಾಣ)ದಲ್ಲಿ ಸಂಗ್ರಹಿಸಿಟ್ಟು ವರ್ಷವಿಡಿ ಬಳಸುತ್ತಿದ್ದರು. ಇದು ಸುಮಾರು ೬೦ ಅಡಿ ಉದ್ದ ೨೫ ಅಡಿ ಅಗಲ ಹಾಗೂ ೧೦ ಅಡಿ ಎತ್ತರವಾಗಿದೆ. ಇದರ ಒಳಗೆ ಹೋಗಲು ಮೇಲ್ಭಾಗದಲ್ಲಿ ಕಿಂಡಿಗಳನ್ನು ಬಿಡಲಾಗಿದೆ. ಇದನ್ನು ಸುಟ್ಟ ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಿದ್ದಾರೆ.

**ತುಪ್ಪದ ಕಣಜ**

ಪಾಳೆಯಗಾರರು ತುಪ್ಪವನ್ನು ಸಂಗ್ರಹಿಸಿಡಲು ಬೃಹದಾಕಾರವಾದ ಬಂಡೆಯ ಮೇಲೆ ಒಂದು ಕಣಜವನ್ನೇ (ಉಗ್ರಾಣ) ನಿರ್ಮಿಸಿದ್ದಾರೆ. ಇದರಲ್ಲಿ ಸಂಗ್ರಹಿಸಿದ ತುಪ್ಪವನ್ನು ಯುದ್ಧದ ಸಮಯದಲ್ಲಿ ಮದ್ದು ಗುಂಡು ನೆಡಿಸಲು ಕೋವಿಗಳಿಗೆ ಸವರಲು ಮತ್ತು ಗಾಯಗೊಂಡ ಸೈನಿಕರ ಶಸ್ತ್ರ ಚಿಕಿತ್ಸೆ ಮಾಡಲು ಬಳಸುತ್ತಿದ್ದರು. ಇದು ದೊಡ್ಡ ಬಂಡೆಯ ಮೇಲೆ ತಳಮಟ್ಟದಿಂದ ಮೇಲಕ್ಕೆ ಚೌಕಾಕಾರದ ಇಟ್ಟಿಗೆ ಗಾರೆಗಳಿಂದ ಗೋಡೆಯನ್ನು ನಿರ್ಮಿಸಿದ್ದು ಇದನ್ನು ತಲುಪುವ ದಾರಿ ಅಸಾಧ್ಯ. ಒಂದು ಪಾಳೆಯ ಪಟ್ಟನ್ನು ಉಳಿಸಲು ಪಾಳೆಯಗಾರರು ಎಷ್ಟು ಮುಖ್ಯವೋ ಕೋಟೆಯ ಪಾತ್ರವೂ ಅಷ್ಟೇ ಮುಖ್ಯವಾದುದು. ಆದ್ದರಿಂದ ಹಿಂದಿನವರು ಬೆಟ್ಟ ಗುಡ್ಡಗಳ ಮೇಲೆ ಕೋಟೆಗಳನ್ನು ಕಟ್ಟಿ ತಮ್ಮನ್ನು ರಕ್ಷಿಸಿಕೊಳ್ಳುತ್ತಿದ್ದರು.



# ಅಧ್ಯಾಯ : ಐದು

## ಸ್ಥಳೀಯ ಪಾಳೆಯಗಾರರ ಜೊತೆಗಿನ ಸಂಬಂಧಗಳು

ಜರಿಮಲೆ ಪಾಳೆಯಗಾರರು ಕರ್ನಾಟಕದ ಹಲವಾರು ಪಾಳೆಯಗಾರರ ಜೊತೆಗೆ ಉತ್ತಮವಾದ ಸಂಬಂಧವನ್ನು ಇಟ್ಟುಕೊಂಡಿದ್ದರು. ಆಡಳಿತದ ಅನುಕೂಲಕ್ಕಾಗಿ ಹಾಗೂ ಸಾಮ್ರಾಜ್ಯವನ್ನು ವಿಸ್ತರಿಸಲು ಇವರು ಹಲವಾರು ಪಾಳೆಯಗಾರರಾದ ಚಿತ್ರದುರ್ಗ ಪಾಳೆಯಗಾರರು, ಹರಪನಹಳ್ಳಿ ಪಾಳೆಯಗಾರರು, ಗುಡಿಕೋಟೆ ಪಾಳೆಯಗಾರರು, ಸುರಪುರ ಪಾಳೆಯಗಾರರು ಇನ್ನು ಮುಂತಾದ ಪಾಳೆಯಗಾರರ ಜೊತೆಗೆ ಜರಿಮಲೆ ಪಾಳೆಯಗಾರರು ಬಹಳ ಅವಿನಾಭಾವ ಸಂಬಂಧವನ್ನು ಇಟ್ಟುಕೊಂಡಿದ್ದರು. ವಿಜಾಪುರದ ಸುಲ್ತಾನನಿಂದ ಬಿರುದು ಪಡೆದುಕೊಂಡಿದ್ದ ಜರಿಮಲೆಯವರು ಸುಲ್ತಾನರಿಗೆ ಅವಿಧೇಯವಾಗಿ ನಡೆದುಕೊಂಡು ನಗರದವರ ಜೊತೆ ಸೇರಿಕೊಂಡಿದ್ದರಿಂದ ಅವರನ್ನು ಶಿಕ್ಷಿಸಲು ಸೇನಾ ಸಮೇತರಾಗಿ ಬಂದರು. ಆ ವೇಳೆಗೆ ಭೂಮಿರಾಜ ಮತ್ತು ಆತನ ಸೋದರರು ಮರಣ ಹೊಂದಿದ್ದು ಇಮ್ಮಡಿ ನಾಯಕನು ಆಳ್ವಿಕೆ ಮಾಡುತ್ತಿದ್ದನು. ಜರಿಮಲೆ ಪಾಳೆಯಗಾರರು ತಮ್ಮ ಅಸ್ತಿತ್ವಕ್ಕಾಗಿ ವಿಜಾಪುರದ ಸುಲ್ತಾನರೊಂದಿಗೆ ಹೋರಾಟ ಮಾಡಿರುವುದನ್ನು ಕಾಣಬಹುದು. ಆ ಸಂದರ್ಭದಲ್ಲಿ ಕರ್ನಾಟಕದ ಇತರ ಪಾಳೆಯಗಾರರು ಆದ ಚಿತ್ರದುರ್ಗ ಪಾಳೆಯಗಾರರು ಮತ್ತು ಹರಪನಹಳ್ಳಿ ಪಾಳೆಯಗಾರರು, ಗುಡೆಕೋಟೆ ಪಾಳೆಯಗಾರರು ಸಹ ಜರಿಮಲೆಯ ಪಾಳೆಯಗಾರರಿಗೆ ಆಡಳಿತಾತ್ಮಕವಾಗಿ, ರಾಜಕೀಯವಾಗಿ ಸ್ನೇಹಪೂರ್ವಕವಾಗಿ ಸಹಾಯ ಮಾಡಿರುವುದನ್ನು ಇವರ ಅವಿಸ್ಮರಣೀಯ ಹೋರಾಟದಿಂದ ತಿಳಿಯಬಹುದು.

ವಿಜಾಪುರದ ಸುಲ್ತಾನನು ಉಜ್ಜಯನಿಗೆ ಮುತ್ತಿಗೆ ಹಾಕಿ ಜರಿಮಲೆಯ ಪಾಳೆಯಗಾರರನ್ನು ಸೆರೆ ಹಿಡಿದನು. ನಂತರ ತಮ್ಮ ಸೇನೆಯ ಒಂದು ತುಕಡಿಯನ್ನು ಅಲ್ಲಿ ಇಟ್ಟು ನಗರದವರ ವಿರುದ್ಧ ಹೊರಟನು. ಅವರನ್ನೂ ಶಿಕ್ಷಿಸಿದರು. ಈ ಅವಧಿಯಲ್ಲಿ ಜರಿಮಲೆ ಪಾಳೆಯಗಾರ ಇಮ್ಮಡಿ ನಾಯಕನಿಗೆ ಜರಿಮಲೆ ಪಾಳೆಯಗಾರರ ಪವಿತ್ರ ಧಾರ್ಮಿಕ ಕ್ಷೇತ್ರವಾದ ಉಜ್ಜಯನಿಯನ್ನು ಓಂತಿರುಗಿ ಪಡೆದುಕೊಳ್ಳಲಿಕ್ಕೆ ಹಣ ನೀಡಬೇಕೆಂದು ಒತ್ತಾಯಿಸಿದಾಗ ಅದನ್ನು ಸಂದಾಯ ಮಾಡುವುದಕ್ಕೆ ಜರಿಮಲೆ ಪಾಳೆಯಗಾರನಾದ ಇಮ್ಮಡಿ ನಾಯಕನು ಪ್ರಯತ್ನ ಮಾಡುತ್ತಿದ್ದನು.

ಅವಕಾಶಕ್ಕಾಗಿ ಕಾಯುತ್ತಿದ್ದ "ಹರಪನಹಳ್ಳಿ ಪಾಳೆಯಗಾರರು ಆ ವಿಜಾಪುರದ ಸುಲ್ತಾನರಿಗೆ ೭೦೦ ಪಗೋಡ ಹಣವನ್ನು ನೀಡಿ ಜರಿಮಲೆ ಪಾಳೆಯಗಾರರ ಪವಿತ್ರ ಧಾರ್ಮಿಕ ಕ್ಷೇತ್ರವಾದ ಉಜ್ಜಯನಿಯನ್ನು ಪಡೆದುಕೊಂಡರು."[೧]

ಹೀಗೆ ಜರಿಮಲೆ ಪಾಳೆಯಗಾರರು ತಮ್ಮ ಆರಾಧ್ಯ ದೈವ ಕ್ಷೇತ್ರವಾದ ಉಜ್ಜಯನಿಯನ್ನು ಕಳೆದುಕೊಂಡ ಇಮ್ಮಡಿ ನಾಯಕನು ಹರಪನಹಳ್ಳಿ ಪಾಳೆಯಗಾರರ ವಿರುದ್ಧ ಜರಿಮಲೆ ಪಾಳೆಯಗಾರರ ಪ್ರಮುಖ ದೊರೆಯಾದ ಇಮ್ಮಡಿ ನಾಯಕನು ಒಳಗೆ ದ್ವೇಷ ಸಾಧಿಸುತ್ತಾ ತನ್ನ ಮತ್ತೊಂದು ಜಾಗೀರಾದ ಕೂಡಲಗಿಗೆ ಆಗಮಿಸಿದನು. ಈ ರೀತಿಯಾಗಿ ಜರಿಮಲೆ ಪಾಳೆಯಗಾರರಿಗೂ ಮತ್ತು ಹರಪನಹಳ್ಳಿ ಪಾಳೆಯಗಾರರಿಗೆ ರಾಜಕೀಯ ಸಂಬಂಧವನ್ನು ಇರುವುದನ್ನು ಈ ಮೇಲಿನ ಘಟನೆಯಿಂದ ತಿಳಿಯಬಹುದು. ಹಾಗೂ ಇದೇ ರೀತಿಯಲ್ಲಿ ಚಿತ್ರದುರ್ಗದ ಪಾಳೆಯಗಾರರು ಜೊತೆಗೆ ರಾಜಕೀಯ ಸಂಬಂಧವನ್ನು ಬೆಳೆಸಿರುವುದನ್ನು ಈ ಮುಂದಿನ ಅಂಶಗಳಿಂದ ತಿಳಿಯಬಹುದು. ಇದೇ ಸಮಯದಲ್ಲಿ ಚಿತ್ರದುರ್ಗದ ಪಾಳೆಯಗಾರರು ಜರಿಮಲೆಯ ಪಾಳೆಯಗಾರನಾದ ಇಮ್ಮಡಿ ನಾಯಕನಿಗೆ ಸೇರಿದ್ದ ಕಣಕುಪ್ಪೆಯ ಮೇಲೆ ಆಕ್ರಮಣ ಮಾಡಿ ಆ ಪ್ರದೇಶವನ್ನು ವಶಪಡಿಸಿಕೊಂಡನು. ಚಿತ್ರದುರ್ಗ ಪಾಳೆಯಗಾರರ ಶಕ್ತಿಯನ್ನು ತಿಳಿದುಕೊಂಡಿದ್ದ ಜರಿಮಲೆಯ ಪಾಳೆಯಗಾರನಾದ ಇಮ್ಮಡಿ ನಾಯಕನು ಚಿತ್ರದುರ್ಗ ನಾಯಕರ ಜೊತೆಗೆ ಸಂಘರ್ಷವನ್ನು ಮಾಡಲಿಚ್ಛಿಸದೇ ಸ್ನೇಹವೇ ಲೇಸೆಂದು ತಿಳಿದು ಚಿತ್ರದುರ್ಗದ ಪಾಳೆಯಗಾರರನ್ನು ಗೌರವಿಸಲಿಕ್ಕೆ ಕೂಡಲಗಿಯಿಂದ ಭೂಪ ಸಮುದ್ರಕ್ಕೆ ಹೋದನು. ಈ ಅವಕಾಶವನ್ನು ಉಪಯೋಗಿಸಿಕೊಂಡ ಹರಪನಹಳ್ಳಿ ಪಾಳೆಯಗಾರರು ಕೂಡಲಗಿಯನ್ನು ಆಕ್ರಮಿಸಿಕೊಂಡನು. ತನ್ನ ತಂದೆಯಿಂದ ಪಡೆದುಕೊಂಡಿದ್ದ ಎಲ್ಲಾ ಭಾಗಗಳನ್ನು ಕಳೆದುಕೊಂಡ ಜರಿಮಲೆ ಪಾಳೆಯಗಾರನಾದ ಇಮ್ಮಡಿ ನಾಯಕನು ನೆಲೆಯಿಲ್ಲದೆ ಅಲೆದಾಡುವಂತಾಯಿತು. ತನ್ನ ಸುರಕ್ಷತೆಗೋಸ್ಕರ ಭದ್ರವಾದ ಸ್ಥಳವನ್ನು ಹುಡುಕತೊಡಗಿದನು. ಅವನು ಈಗಿನ ಜರಿಮಲೆ ಎಂಬ ಸ್ಥಳಕ್ಕೆ ಬಂದು ಅದನ್ನು ತನ್ನ ರಕ್ಷಣೆಗೆ ಸೂಕ್ತವಾದವೆಂದು ತಿಳಿದುಕೊಂಡು, ಚಿತ್ರದುರ್ಗದ ನಾಯಕರೊಂದಿಗೆ ಮಾತುಕತೆ ನಡೆಸಿ ಶಾಂತಿ ಒಪ್ಪಂದ ಮಾಡಿಕೊಂಡನು. ಹೀಗೆ ಜರಿಮಲೆ ಪಾಳೆಯಗಾರರು ಮತ್ತು ಚಿತ್ರದುರ್ಗದ ಪಾಳೆಯಗಾರರು ರಾಜಕೀಯವಾದ ಸಂಬಂಧವನ್ನು ತಿಳಿಯಬಹುದು. ಹಾಗೂ ಜರಿಮಲೆ ಪಾಳೆಯಗಾರರು ಮತ್ತು ಚಿತ್ರದುರ್ಗದ ಪಾಳೆಯಗಾರರಿಗೂ ರಾಜಕೀಯ ಸಂಬಂಧದಿಂದ ಸ್ನೇಹಕ್ಕೆ ತಿರುಗಿ ಕೊನೆಗೆ ವೈವಾಹಿಕ ಸಂಬಂಧಕ್ಕೆ ತಿರುಗಿ ಚಿತ್ರದುರ್ಗ ನಾಯಕ ಮನೆತನಕ್ಕೆ ಅಳಿಯನಾದನು. ದುರ್ಗದವರ ಅಂದರೆ ಚಿತ್ರದುರ್ಗ ಪಾಳೆಯಗಾರರ ಬೆಂಬಲವನ್ನು ಮತ್ತು ಅವರ ಸಂಬಂಧವನ್ನು ಜರಿಮಲೆ ಪಾಳೆಯಗಾರರು ಪಡೆದುಕೊಂಡರು. ಜರಿಮಲೆ ಪಾಳೆಯಗಾರರು ತಮ್ಮ ಸುತ್ತಲಿನ ಪಾಳೆಯಗಾರರ ಭೀತಿಯಿಂದ ಪಾರಾಗಿ ಧೈರ್ಯದಿಂದ ಜರಿಮಲೆ ಪಾಳೆಯಗಾರರು ದಕ್ಷವಾದ ಆಡಳಿತವನ್ನು ನಡೆಸುವುದರ

ಮೂಲಕ ಜರಿಮಲೆಯಲ್ಲಿ ಅಂದರೆ ಬೆಟ್ಟದ ಮೇಲೆ "ಕೋಟೆಯನ್ನು, ಅರಮನೆಯನ್ನು ನಿರ್ಮಾಣ ಮಾಡಿ ಜನರು ವಾಸಿಸುವುದಕ್ಕೆ ಎಲ್ಲಾ ರೀತಿಯ ಅನುಕೂಲ ಮಾಡಿಕೊಟ್ಟನು."[೨]

ಹಟ್ಟಿ ನಾಯಕ ಮನೆತನದ ಮಲ್ಲಪ್ಪ ನಾಯಕನ ಮಗಳನ್ನು ವಿವಾಹವಾಗಿ ಜರಿಮಲೆಯಲ್ಲಿ ನಿರಾತಂಕವಾಗಿ ಯಾವ ಪಾಳೆಯಗಾರರ ವಿರೋಧವಿಲ್ಲದೆ ಕೆಲಕಾಲ ಸಮೃದ್ಧವಾಗಿ ಸುಭೀಕ್ಷವಾಗಿ ಯಾರ ತೊಂದರೆ ಇಲ್ಲದೆ ನಿರ್ಭಯವಾಗಿ ರಾಜ್ಯವನ್ನು ವ್ಯವಸ್ಥಿತವಾಗಿ ಆಳಿದನು. ಅಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಅಥವಾ ಸನ್ನಿವೇಶದಲ್ಲಿ ಜರಿಮಲೆ ಪಾಳೆಯಗಾರರ ದೊರೆಯಾದ ಇಮ್ಮಡಿ ನಾಯಕನು ತೆಗೆದುಕೊಂಡ ನಿರ್ಧಾರ ಬಹಳ ವ್ಯವಸ್ಥಿತವಾಗಿತ್ತು. ಇಮ್ಮಡಿ ನಾಯಕನ ಇಬ್ಬರು ಪತ್ನಿಯರಲ್ಲಿ ಬೊಮ್ಮಂತರಾಜ ಮತ್ತು ಕಿರಿ ಇಮ್ಮಡಿ ನಾಯಕ ಎಂಬ ಇಬ್ಬರು ಮಕ್ಕಳು ಜನಿಸಿದರು. ಆದರೆ ದುರಾದೃಷ್ಟವಶಾತ್ ಅಕಾಲ ಮರಣಕ್ಕೀಡಾದ ಬೊಮ್ಮಂತರಾಜನ ಉತ್ತರಾಧಿಕಾರಿಯಾಗಿ ಕಿರಿ ಇಮ್ಮಡಿ ನಾಯಕನು ಜರಿಮಲೆ ಸಂಸ್ಥಾನದ ನಾಯಕನಾಗಿ ಆಳ್ವಿಕೆ ನಡೆಸಿದನು.

ಪಾಪಣ್ಣ ನಾಯಕನ ನಂತರ, ಅವನ ಮಗನಾದ ಪೆನ್ನಪ್ಪನಾಯಕನು ವಡ್ಡು ದರೋಜಿಗಳ ಒಡೆಯನಾದನು. ಪೆನ್ನಪ್ಪನಾಯಕನ ನಿಷ್ಠೆ ಹಾಗೂ ಶೌರ್ಯಕ್ಕೆ ಚಕ್ರವರ್ತಿ ತುಳುವ ವೀರನರಸಿಂಹ ರಾಯನು ಗುಡಿಕೋಟೆ, ಭೀಮಸಮುದ್ರಗಳನ್ನು ಬಳುವಳಿಯಾಗಿ ನೀಡುವನು. ಇಲ್ಲಿ ಜರಿಮಲೆ ಪಾಳೆಯಗಾರರು ಮತ್ತು ವಿಜಯನಗರದ ಅರಸರಿಗೆ ಉತ್ತಮವಾದ ಸಂಬಂಧವನ್ನು ಹೊಂದಿರುವುದನ್ನು ಕಾಣಬಹುದು. ಜರಿಮಲೆ ಪಾಳೆಯಗಾರನು ಒಂದು ದೇವಾಲಯ ಮತ್ತು ಮಠವನ್ನು ನಿರ್ಮಿಸಿ, ಅವುಗಳಿಗೆ ಕೋಟೆ ಕಟ್ಟಿಸಿ, 'ಉಜ್ಜನಿ' ಎಂದು ಹೆಸರಿಟ್ಟು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡನು. ಈತನು ವಿಜಯನಗರದ ಶ್ರೀ ಕೃಷ್ಣದೇವರಾಯನಿಗೂ ಅಚ್ಚುತರಾಯನಿಗೂ ಬಹಳ ನಿಷ್ಠೆಯಿಂದ ಪ್ರಾಮಾಣಿಕವಾಗಿ ಇದ್ದನು. "ಜರಿಮಲೆ ಪಾಳೆಯಗಾರನು ವಿಜಯನಗರದ ದೊರೆಯಾದ ಅಚ್ಚುರಾಯನಿಂದ ನಾಲ್ಕು ಗ್ರಾಮಗಳನ್ನು ಮತ್ತೆರಡು ಮಾಗಣಿಗಳನ್ನು ಪಡೆದನು."[೩] ಬಿಜಾಪುರದ ಸುಲ್ತಾನನು ವಿಜಯನಗರದ ಮೇಲೆ ದಾಳಿ ಮಾಡಿದಾಗ ಕೆಲವು ಗಡಿ ಪ್ರದೇಶದ ಪಾಳೆಯಗಾರರು, ಸಂಸ್ಥಾನಿಕರು ಅಚ್ಯುತರಾಯನಿಗೆ ವಂಚನೆ ಮಾಡಿ, ಬಿಜಾಪುರದ ಸುಲ್ತಾನನಿಗೆ ಸಹಾಯ ಮಾಡಿದರು. ಇದನ್ನು ತಿಳಿದ ಅಚ್ಯುತರಾಯನ ಆದೇಶದಂತೆ ಪೆನ್ನಪ್ಪನಾಯಕನು ಕಣಕುಪ್ಪೆ, ಕೂಡಲಿಗಿ ನಾರಾಯಣ ದೇವರಕೆರೆ, ಡಣಾಯಕನಕೆರೆ, ಸೊಂಡೂರು ಪ್ರದೇಶಗಳನ್ನು ಆಕ್ರಮಿಸಿ ತನ್ನದಾಗಿ ಮಾಡಿಕೊಂಡು, ಅಲ್ಲಿ ತನ್ನ ಸೇನಾ ಬಲವನ್ನಿಟ್ಟನು. ಪೆನ್ನಪ್ಪ ನಾಯಕನಿಗೆ ಬಸವಂತರಾಜ, ಭೂಮಿರಾಜ ಮತ್ತು ಬೂದಿಸಿದ್ದರಾಜರೆಂಬ ಮಕ್ಕಳು ಜಂಪಾನಾಗತಿ ಎಂಬ ಹೆಣ್ಣು ಮಗಳು ಇದ್ದರು, ಜಂಪಾನಾಗತಿಯನ್ನು ಹರಪನಹಳ್ಳಿಯ ದಾದಾನಾಯಕನಿಗೆ ಮದುವೆ ಮಾಡಿಕೊಟ್ಟಿದ್ದರು. ಹೀಗೆ ಜರಿಮಲೆ ಪಾಳೆಯಗಾರರಿಗೂ ಮತ್ತು ಹರಪನಹಳ್ಳಿ ಪಾಳೆಯಗಾರರಿಗೂ ವೈವಾಹಿಕ ಸಂಬಂಧ ಇರುವುದನ್ನು ಈ ಮೇಲಿನ ಅಂಶದಿಂದ ಕಾಣಬಹುದು. 'ಹರಪನಹಳ್ಳಿ ಪಾಳೆಯಗಾರರು' ಎಂಬುದರಲ್ಲಿ ರಂಗಣ್ಣನಾಯಕನು "ಜರಿಮಲೆಯ

ಚಂಪಾನಾಗತಿಯನ್ನು ಮದುವೆಯಾದನು ಎಂದೂ, ಹಟ್ಟಿ ಪಾಳೆಯಗಾರರ ವಂಶಾವಳಿಯಲ್ಲಿ ಬಂಗಾರಪ್ಪನಾಯಕನು ಜರಿಮಲೆಯ ಪಾಪಮ್ಮ ನಾಗತಿಯನ್ನು ಮದುವೆಯಾದನು"[೪] ಎಂದು ಹೇಳಿದೆ. ಶತ್ರುಗಳಾಗಿದ್ದ ಹರಪನಹಳ್ಳಿ ಪಾಳೆಯಗಾರರು ಜರಿಮಲೆಯವರಿಗೆ ಪದೇ ಪದೇ ಕಿರುಕುಳ ಕೊಡಲಾರಂಭಿಸಿದರು. ನಂತರ ಬಂದ ಬೊಮ್ಮಣ್ಣ ನಾಯಕನ ಕಾಲದಲ್ಲಿ ಇದು ಹೆಚ್ಚಾಯಿತು. ಹರಪನಹಳ್ಳಿಯವರೇ ಅಲ್ಲದೇ ಚಿತ್ರದುರ್ಗದವರೂ ಕೂಡ ಜರಿಮಲೆಯವರಿಗೆ ತೊಂದರೆ ಕೊಡಲಾರಂಭಿಸಿದರು. "ಚಿತ್ರದುರ್ಗದ ಪಾಳೆಯಗಾರನಾದ ಚಿಕ್ಕಣ್ಣ ನಾಯಕನು ಜರಿಮಲೆಯವರಿಗೆ ಸೇರಿದ್ದ ಉಜ್ಜಯನಿ ದುರ್ಗದ ಮೇಲೆ ಆಕ್ರಮಣ ಮಾಡಿದನು."[೫]

ಇದರಿಂದ ಜರಿಮಲೆ ಪಾಳೆಯಗಾರರು ಚಿತ್ರದುರ್ಗದ ಸೈನ್ಯವನ್ನು ಎದುರಿಸುವಷ್ಟು ಬಲ ಹೊಂದಿಲ್ಲದ ಜರಿಮಲೆಯ ಪಾಳೆಯಗಾರನಾದ ಬೊಮ್ಮಣ್ಣ ನಾಯಕನು ಅವರೊಂದಿಗೆ ಸಂಧಾನ ನಡೆಸಿ ಧಾರ್ಮಿಕ ಕ್ಷೇತ್ರವಾದ ಉಜ್ಜಯನಿಯನ್ನು ವಾಪಸ್ ಪಡೆದುಕೊಂಡನು. ಪ್ರಾರಂಭದಲ್ಲಿ ರಾಜಕೀಯವಾಗಿ, ಸ್ನೇಹಪೂರ್ವಕವಾಗಿ, ಮತ್ತು ವೈವಾಹಿಕ ಸಂಬಂಧಗಳಿಂದ ಬೆಸೆದುಕೊಂಡಿದ್ದ ಜರಿಮಲೆ ಪಾಳೆಯಗಾರರ ಮತ್ತು ಚಿತ್ರದುರ್ಗ ಪಾಳೆಯಗಾರರ ಸಂಬಂಧವು ಎಲ್ಲ ರೀತಿಯಿಂದ ಅಂದರೆ ಕೊನೆಯವರೆಗೂ ಪರಸ್ಪರ ಶಾಶ್ವತವಾಗಿರುವಂತೆ ನೋಡಿಕೊಂಡರು. ಅವರಿಬ್ಬರ ನಡುವೆ ಎಷ್ಟೇ ಯುದ್ಧಗಳು ವಿರಹ, ಜಗಳು ನಡೆದರೂ ಸಹ ಆ ಎರಡು ಪಾಳೆಯಗಾರರ ವಂಶಗಳು ಬಹಳ ಅನ್ಯೋನ್ಯವಾಗಿ ಒಳ್ಳೆಯ ಗಟ್ಟಿ ಸಂಬಂಧವನ್ನು ಬೆಸೆದುಕೊಂಡಿದ್ದನು. ಆದರೆ ಹರಪನಹಳ್ಳಿ ಪಾಳೆಯಗಾರರು ಜರಿಮಲೆಯ ಪಾಳೆಯಗಾರರಿಗೆ ರಾಜಕೀಯ, ಸೈನಿಕವಾಗಿ ಹಲವು ರೀತಿಯಲ್ಲಿ ಹಲವಾರು ಬಾರಿ ಬಹಳ ತೊಂದರೆಯನ್ನುಂಟುಮಾಡಿದ್ದಾರೆ. ರಾಜಕೀಯವಾಗಿ ದ್ವೇಷ ಸಾಧಿಸುತ್ತಿದ್ದ ಹರಪನಹಳ್ಳಿ ಪಾಳೆಯಗಾರರು ಒಳ್ಳೆಯ ಸಮಯಕ್ಕಾಗಿ, ಒಳ್ಳೆಯ ಅವಕಾಶಕ್ಕಾಗಿ ಸದಾ ಕಾಲ ಹೊಂಚು ಹಾಕುತ್ತಿದ್ದರು. ಇದರಿಂದ ಅವಕಾಶವಾದಿಗಳಾಗಿದ್ದ ಹರಪನಹಳ್ಳಿ ನಾಯಕರು ಉಜ್ಜಯನಿಯನ್ನು ಪಡೆದೇ ತೀರಬೇಕೆಂಬ ಛಲದಿಂದ ಬಿದನೂರಿನವರ ಜೊತೆ ಕೈ ಜೋಡಿಸಿದರು. ಇಬ್ಬರೂ ಒಟ್ಟಾಗಿ ಜರಿಮಲೆಯವರ ಮೇಲೆ ಆಕ್ರಮಣ ಮಾಡಿದರು ಬೊಮ್ಮಣ್ಣ ನಾಯಕನ ಸಹಾಯಕ್ಕೆ ಚಿತ್ರದುರ್ಗದ ಸೇನೆ ಆಗಮಿಸಿತು. ಕ್ರಿ.ಶ. ೧೬೮೫ರ ಕಾರ್ತಿಕ ಶುದ್ಧದಲ್ಲಿ ಉಜ್ಜಯನಿಯ ಕೋಟೆಯನ್ನು ೧೨ ದಿವಸಗಳು ಮುತ್ತಿ ಊರನ್ನು ತೆಗೆದುಕೊಂಡರು. ಆ ಯುದ್ಧದಲ್ಲಿ ಚಿತ್ರದುರ್ಗದ ಪಾಳೆಯಗಾರರ ಸೈನ್ಯವು ಯಶಸ್ವಿಯಾಗಿ ಹೋರಾಟ ಮಾಡಿ ಜರಿಮಲೆಯ ಪಾಳೆಯಗಾರರಿಗೂ ಸಹಾಯ ಮಾಡಿದರು. ಕೊನೆಗೆ ದುರ್ಗದ ಸೈನ್ಯವು ಸೋತು ಹೋಯಿತು. ಆ ಕೋಟೆಯಲ್ಲಿದ್ದ "ಜರಿಮಲೆ ಬೊಮ್ಮಣ್ಣ ನಾಯಕನನ್ನು ಹರಪನಹಳ್ಳಿ ಪಾಳೆಯಗಾರರು ಸೆರೆಮನೆಯಲ್ಲಿ ಹಾಕಿ ಸುಮಾರು ದಿನಗಳ ನಂತರ ಹೊರಗಡೆ ಬಿಟ್ಟುರು."[೬]

ಹರಪನಹಳ್ಳಿ ಪಾಳೆಯಗಾರರು ಜರಿಮಲೆ ಪಾಳೆಯಗಾರರನ್ನು ಸೋಲಿಸಿ ನಾರಾಯಣ ದೇವರಕೆರೆ, ಡಣಾಯಕನಕೆರೆ ಪ್ರದೇಶಗಳನ್ನು ವಶಪಡಿಸಿಕೊಂಡರು. ಜರಿಮಲೆ ಪಾಳೆಯಗಾರರು

ಇತರ ಪಾಳೆಯಗಾರರ ಜೊತೆಗೆ ಸಂಬಂಧ ಹೊಂದಿದಂತೆ ಚಿತ್ರದುರ್ಗದವರ ವಿರುದ್ಧವಾಗಿ ಹೈದರಾಲಿಯೊಂದಿಗೆ ಉತ್ತಮ ಸಂಬಂಧ ಹೊಂದಿದ್ದರು. ಅನೇಕ ಬಾರಿ ಹೈದರಾಲಿಯು ಜರಿಮಲೆ ಪಾಳೆಯಗಾರರಿಗೆ ಅನೇಕ ರೀತಿಯಲ್ಲಿ ಸಹಾಯ ಮಾಡಿದ್ದಾನೆ. ಅಂದರೆ ರಾಜಕೀಯವಾಗಿ, ಅಲ್ಲದೆ ಉತ್ತಮ ಆಡಳಿತಕ್ಕಾಗಿ ಜರಿಮಲೆ ಪಾಳೆಯಗಾರರು ಹೈದರಾಲಿಯ ಸಂಬಂಧವನ್ನು ಉತ್ತಮ ರೀತಿಯಲ್ಲಿ ವ್ಯವಸ್ಥಿತವಾಗಿ ಭದ್ರಪಡಿಸಿಕೊಂಡರು. ಅಲ್ಲದೆ ಜರಿಮಲೆ ಪಾಳೆಯಗಾರರು ಚಿತ್ರದುರ್ಗ ಪಾಳೆಯಗಾರರನ್ನು ಶತ್ರುಗಳನ್ನಾಗಿ ಮಾಡಿಕೊಂಡು ಹೈದರಾಲಿಗೆ ಎಲ್ಲಾ ರೀತಿಯ ಸಹಾಯವನ್ನು ಮಾಡಿದರು. ಹಾಗೂ ಜರಿಮಲೆ ಪಾಳೆಯಗಾರರು ೫ನೇ ಮದಕರಿ ನಾಯಕನು ಆಳ್ವಿಕೆ ಮಾಡುವ ಸಂದರ್ಭದಲ್ಲಿ ಚಿತ್ರದುರ್ಗ ಕೋಟೆಯ ರಹಸ್ಯ ದಾರಿಗಳನ್ನು ಮತ್ತು ಎಲ್ಲಾ ರೀತಿಯ ಯುದ್ಧದ ಸಹಾಯವನ್ನು ಹೈದರಾಲಿಗೆ ಜರಿಮಲೆ ಪಾಳೆಯಗಾರರು ಮಾಡಿದರು. ಇದರಿಂದ ಚಿತ್ರದುರ್ಗ ಸಂಸ್ಥಾನವು ಸಂಪೂರ್ಣವಾಗಿ ಸೋಲಲು ಹಾಗೂ ಹೈದರಾಲಿ ಪಾಳೆಯಗಾರರು ಸಂಪೂರ್ಣವಾಗಿ ಆಕ್ರಮಿಸಿಕೊಳ್ಳಲು ಜರಿಮಲೆ ಪಾಳೆಯಗಾರರು ಎಲ್ಲಾ ರೀತಿಯೂ ಸಹಕಾರವನ್ನು ಮಾಡಿದರು. ಆದರೆ ಹೈದರಾಲಿಯ ಮಗ ಟಿಪ್ಪು ಪಾಳೆಯಗಾರರ ಕಡು ವಿರೋಧಿಯಾಗಿದ್ದನು. ಹಾಗಾಗಿ "ಜರಿಮಲೆಯನ್ನು ಟಿಪ್ಪುವು ಜರಿಮಲೆ ಪಾಳೆಯಗಾರರನ್ನು ಸೋಲಿಸಿ ಜರಿಮಲೆ ಸಂಸ್ಥಾನವನ್ನು ವಶಪಡಿಸಿಕೊಂಡನು."[೭]

"ಜರಿಮಲೆ ನಾಯಕರನ್ನು ಟಿಪ್ಪುಸುಲ್ತಾನನು ಸೆರೆಹಿಡಿದು ಅವರಿಗೆ ಇಸ್ಲಾಂ ಮತಕ್ಕೆ ಪರಿವರ್ತನೆಯಾಗುವಂತೆ ಬಲವಂತ ಮಾಡಿದ್ದರಿಂದ ಜರಿಮಲೆಯವರು ಉಪಾಯದಿಂದ ಟಿಪ್ಪುವಿನ ಸೆರೆಯಿಂದ ತಪ್ಪಿಸಿಕೊಂಡು ಸುರಪುರಕ್ಕೆ ಪಲಾಯನ ಮಾಡಿದರೆಂದು ತಿಳಿದುಬರುತ್ತದೆ."[೮]

ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ನಂತರ ಬ್ರಿಟಿಷರು ಮತ್ತು ನಿಜಾಮನಿಗೆ ಆದ ಒಪ್ಪಂದದಂತೆ ಜರಿಮಲೆ ಸಂಸ್ಥಾನವು ಸಂಪೂರ್ಣ ಸೋತು ಟಿಪ್ಪುವಿಗೆ ಶರಣಾಗತಿ ಆಗಿದ್ದರಿಂದ ಟಿಪ್ಪುವಿನ ವಶವಾಗಿದ್ದ ಜರಿಮಲೆಯನ್ನು ಹೈದ್ರಾಬಾದ್ ನಿಜಾಮನಿಗೆ ಸೇರಿತು. ನಂತರ ಜರಿಮಲೆಯವರು ಒಪ್ಪಂದದ ಮೇರೆಗೆ ಪುನಃ ಹೈದ್ರಾಬಾದ್ ನಿಜಾಮನಿಂದ ಪಡೆದರೆಂದು ಕಾಣುತ್ತದೆ. ಇವರ ರಾಜಕೀಯವಾಗಿ ಅಸ್ಥಿರತೆಯಿಂದಾಗಿ ಇವರ ಮೇಲೆ ಬಲಾಢ್ಯ ರಾಜ್ಯಗಳಾದ ನಿಜಾಮ, ಮರಾಠರು, ಮೈಸೂರು ಅರಸರು, ಚಿತ್ರದುರ್ಗದ ನಾಯಕರು, ಹರಪನಹಳ್ಳಿ ಪಾಳೆಯಗಾರರು ಪದೇ ಪದೇ ಆಕ್ರಮಣ ಮಾಡುತ್ತಿದ್ದರು. ಹೀಗೆ ಜರಿಮಲೆ ಪಾಳೆಯಗಾರರು ಅನೇಕ ಪಾಳೆಯಗಾರರೊಂದಿಗೆ ಉತ್ತಮ ರಾಜಕೀಯ, ಆಡಳಿತಾತ್ಮಕ ಮತ್ತು ವೈವಾಹಿಕ ಮುಂತಾದ ಸಂಬಂಧ ಹೊಂದಿರುವುದನ್ನು ಈ ಮೇಲಿನ ಅಂಶಗಳಿಂದ ತಿಳಿಯಬಹುದು.

ಜರಿಮಲೆ ಪಾಳೆಯಗಾರರು ಚಿತ್ರದುರ್ಗದ ಪಾಳೆಯಗಾರರೊಂದಿಗೆ ವಿರೋಧವನ್ನು ಕಟ್ಟಿಕೊಂಡು ರಾಜಕೀಯವಾಗಿ ವೈಷಮ್ಯದ ದ್ವೇಷದ ಸಂಬಂಧವನ್ನು ಹೊಂದಿ ಮೈಸೂರಿನ ದೊರೆಯಾದ ಹೈದರಾಲಿಗೆ ಸ್ನೇಹಪೂರ್ವಕವಾದ ರಾಜಕೀಯ ಸಹಾಯವನ್ನು ಮಾಡಿದರು.

ಚಿತ್ರದುರ್ಗವು ದಕ್ಷಿಣ ಭಾರತದಲ್ಲಿ ಒಂದು ಬಲಿಷ್ಠ ಸಂಸ್ಥಾನವಾಗಿತ್ತು. ಮರಾಠರು ಮತ್ತು ಹೈದರ್ ದುರ್ಗದ ದೊರೆಗಳ ಸಹಾಯವಿಲ್ಲದೆ ಏನೂ ಮಾಡದ ಸ್ಥಿತಿಯಲ್ಲಿದ್ದರು. ಇಷ್ಟು ಬಲಿಷ್ಠವಾದ ಸಾಮ್ರಾಜ್ಯವು ಚಿತ್ರದುರ್ಗದ ಪಾಳೆಯಗಾರರ ಸಾಮ್ರಾಜ್ಯವು ಆಗಿತ್ತು. ಇದರಿಂದ ಮೈಸೂರಿನ ದೊರೆಯಾದ ಹೈದರಾಲಿಗೂ ಮತ್ತು ಚಿತ್ರದುರ್ಗದ ಮದಕರಿನಾಯಕನಿಗೂ ಯುದ್ಧ ನಡೆಯುವ ಸಂಭವ ಸೃಷ್ಟಿಯಾಯಿತು. ಇಂತಹ ಸಂದರ್ಭದಲ್ಲಿ ಜರಿಮಲೆ ನಾಯಕರಿಗೂ ಪತ್ರ ತಲುಪುತ್ತದೆ. ಅಲ್ಲಿದ್ದ ಬೊಮ್ಮಣ್ಣ ನಾಯಕನು ಸೇನೆಯನ್ನು ಸಂಗ್ರಹಿಸಿ ಸಂಸಥಾನದ ವ್ಯವಹಾರವನ್ನು ತನ್ನ ಸೋದರನಾದ ಮಲ್ಲಿಕಾರ್ಜುನ ನಾಯಕನಿಗೆ ವಹಿಸಿ ಚಿತ್ರದುರ್ಗದತ್ತ ಹೊರಟನು. ಆ ವೇಳೆಗೆ ಹೈದರನು ದುರ್ಗಕ್ಕೆ ಮುತ್ತಿಗೆ ಹಾಕಿ ಮೂರು ತಿಂಗಳುಗಳಾದವು. ಈ ಸನ್ನಿವೇಶದಲ್ಲಿ ಚಿತ್ರುದುರ್ಗದ ಪಾಳೆಯಗಾರರು ಹೈದರನೊಂದಿಗೆ ಒಪ್ಪಂದವೇನಾದರೂ ಮಾಡಿಕೊಳ್ಳಬೇಕಾದ ಸಂದರ್ಭ ಒದಗಿದರೆ ಸೆರೆಮನೆಯಲ್ಲಿದ್ದ ಜರಿಮಲೆ ಪಾಳೆಯಗಾರನಾದ ನಾಯಕ "ಇಮ್ಮಡಿ ನಾಯಕನನ್ನು ಬಿಡುಗಡೆ ಮಾಡಬೇಕಾಗಬಹುದು ಅವನು ತೊಂದರೆ ಕೊಡುವ ವ್ಯಕ್ತಿ ಅಲ್ಲದೆ ಬಲಾಢ್ಯ ಎಂದು ಆಲೋಚನೆ ಮಾಡಿ ಮದಕರಿನಾಯಕನು ಇಮ್ಮಡಿ ನಾಯಕನನ್ನು ಕೊಲೆ ಮಾಡಿದನು."[೯]

ಹೀಗೆ ಜರಿಮಲೆ ನಾಯಕರು, ದುರ್ಗದ ನಾಯಕರೊಂದಿಗೆ ರಾಜಕೀಯ ದ್ವೇಷದಿಂದ ತಮ್ಮ ಸಂಸಥಾನವನ್ನು ನಾಶ ಮಾಡಿಕೊಂಡರು. ಅಲ್ಲದೆ ಹೈದರಾಲಿಯ ಸ್ನೇಹದಿಂದ ಉತ್ತಮಗೊಂಡಿದ್ದ ಜರಿಮಲೆ ಸಂಸ್ಥಾನವು ಕೊನೆಗೆ ಹೈದರಾಲಿಯ ಮಗನಾದ ಟಿಪ್ಪುವಿನ ಕುತಂತ್ರದಿಂದ ಜರಿಮಲೆ ಪಾಳೆಯಗಾರರ ಸಂಸ್ಥಾನವು ನಾಶವಾಗಿ ಹೈದರಾಬಾದಿನ ನಿಜಾಮನ ಆಳ್ವಿಕೆಗೆ ಒಳಪಟ್ಟಿತು.

"ಹರಪನಹಳ್ಳಿಯ ಆರಂಭಿಕ ಪಾಳೆಯಗಾರರಾದ ದಾದಾನಾಯಕ ಹಾಗೂ ರಂಗಣ್ಣ ನಾಯಕರುಗಳು ಜರಿಮಲೆ ಪಾಳೆಯಗಾರರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿ ಕೊಂಡಿದ್ದರು."[೧೦]

ಜರಿಮಲೆ ನಂತರ ಪಾಳೆಯಗಾರರು ಸ್ಥಳೀಯ ಪಾಳೆಯಗಾರರ ಜೊತೆಗೆ ರಾಜಕೀಯ, ವೈವಾಹಿಕ, ಆಡಳಿತಾತ್ಮಕವಾಗಿ ಅನೇಕ ಸಂಬಂಧಗಳನ್ನು ಬೆಳೆಸಿಕೊಂಡಿದ್ದಾರೆ. ಮುಖ್ಯವಾಗಿ ಚಿತ್ರದುರ್ಗದ ಪಾಳೆಯಗಾರರ ಜೊತೆಗೆ, ಹರಪನಹಳ್ಳಿ ಪಾಳೆಯಗಾರರ ಜೊತೆಗೆ ರಾಜಕೀಯವಾಗಿ, ವೈವಾಹಿಕವಾಗಿ ಹಲವಾರು ಸಂಬಂಧಗಳನ್ನು ಹೊಂದಿದ್ದರು.

ಪೆನ್ನಪ್ಪನಾಯಕನಿಗೆ ಬಸವಂತರಾಜ, ಭೂಮಿರಾಜ ಮತ್ತು ಬೂದಿಸಿದ್ಧರಾಜರೆಂಬ ಮಕ್ಕಳು ಜಂಪನಾಗತಿ ಎಂಬ ಹೆಣ್ಣು ಮಗಳು ಇದ್ದರು. ಜಂಪಾನಾಗತಿಯನ್ನು ಹರಪನಹಳ್ಳಿ ದಾದಾ ನಾಯಕನಿಗೆ ಮದುವೆ ಮಾಡಿಕೊಟ್ಟಿದ್ದರು. ಹರಪನಹಳ್ಳಿ ಪಾಳೆಯಗಾರರು ಎಂಬುದರಲ್ಲಿ "ರಂಗಣ್ಣನಾಯಕನು ಜರಿಮಲೆ ಜಂಪಾನಾಗತಿಯನ್ನು ಮದುವೆಯಾದನು" ಎಂದು ಹಟ್ಟಿ

ಪಾಳೆಯಗಾರರ ವಂಶಾವಳಿಯಲ್ಲಿ ಬಂಗಾರಪ್ಪ ನಾಯಕನು ಜರಿಮಲೆಯ ಪಾಪಮ್ಮ ನಾಗತಿಯನ್ನು ಮದುವೆಯಾದನು. ಚಿತ್ರದುರ್ಗದವರ ಸ್ನೇಹ ಬೆಳೆಸಿ, ಚಿತ್ರದುರ್ಗದ ಪಾಳೆಯಗಾರನ ಮಗಳನ್ನು ಮದುವೆಯಾಗಿ, ಸಂಬಂಧ ಬೆಳೆಸಿ, ಜರಿಮಲೆಯನ್ನು ಮತ್ತೆ ಪಡೆದನು. ಜರಿಮಲೆಯ ಕೋಟೆಯನ್ನು ಪುನರ್‌ನಿರ್ಮಿಸಿ ಬಂದೋಬಸ್ತು ಮಾಡಿಕೊಂಡನು. ಹಟ್ಟಿಮಲ್ಲಪ್ಪನ ಮಗಳನ್ನು ಮದುವೆಯಾಗಿ ನಿರಾತಂಕವಾಗಿ, ಯಾವ ಪಾಳೆಯಗಾರರ ವಿರೋಧವೂ ಇಲ್ಲದೆ ರಾಜ್ಯವಾಳುತ್ತಿದ್ದನು. ಚಿತ್ರದುರ್ಗದ ಹೆಣ್ಣು ಮಗಳಿಗೆ ಬೊಮ್ಮಂತರಾಜನೆಂಬ ಮಗನೂ, ಹಟ್ಟಿ ಹೆಣ್ಣು ಮಗಳಿಗೆ ಕಿರಿ ಇಮ್ಮಡಿ ನಾಯಕನೆಂಬ ಮಗನೂ ಹುಟ್ಟಿದರು. ಬೊಮ್ಮಂತರಾಜನು ಅಕಾಲ ಮರಣಕ್ಕೆ ಈಡಾಗಲೂ, ಕಿರಿಯವನಾದ ಕಿರಿ ಇಮ್ಮಡಿನಾಯಕನು ಪಾಳೆಯಗಾರನಾಗುವನು. ಇವನ ಕಾಲದಲ್ಲಿ ಹರಪನಹಳ್ಳಿಯವರು ಮೇಲಿಂದ ಮೇಲೆ ಕಿರುಕುಳಕೊಡಲಾರಂಭಿಸಿದರು. ಈತನ ನಂತರ ಬಂದ ಬೊಮ್ಮಣ್ಣನಾಯಕನ ಕಾಲದಲ್ಲಿ ಹರನಪಹಳ್ಳಿ, ಚಿತ್ರದುರ್ಗದವರು ತೊಂದರೆ ಕೊಡಲಾರಂಭಿಸಿದರು. ಚಿತ್ರದುರ್ಗದ ಚಿಕ್ಕಣ್ಣನಾಯಕನು ಉಜ್ಜನಿಯ ಮೇಲೆ ಆಕ್ರಮಣ ಮಾಡಲು, ಬೊಮ್ಮಣ್ಣನಾಯಕನು ಅವರೊಡನೆ ಸಂಧಾನ ಮಾಡಿಕೊಂಡು ಉಜ್ಜನಿಯನ್ನು ಹಿಂದೆ ಪಡೆದುಕೊಂಡನು. ಆದರೆ ಹರಪನಹಳ್ಳಿಯವರು ಬಿದನೂರಿನವರ ಸಹಾಯದಿಂದ ಉಜ್ಜನಿಯ ಮೇಲೆ ಯುದ್ಧಕ್ಕೆ ಹೋಗಲು, ಬೊಮ್ಮಣ್ಣನಾಯನು ಚಿತ್ರದುರ್ಗದವರ ಸಹಾಯ ಪಡೆದುಕೊಂಡನು. ಆದರೆ ಕ್ರಿ.ಶ. ೧೬೮೫ರಲ್ಲಿ ೧೨ ದಿನಗಳವರೆಗೆ ಉಜ್ಜನಿಯನ್ನು ಮುತ್ತಿ ಗೆದ್ದುಕೊಂಡನು. ಬೊಮ್ಮಣ್ಣನಾಯಕನನ್ನು ಸೆರೆಹಿಡಿದರು. ಮತ್ತೆ ಅವನನ್ನು ಸ್ವತಂತ್ರಗೊಳಿಸಿ ಜರಿಮಲೆಯನ್ನು ಹಿಂದಿರುಗಿಸಿದರು.

ಜರಿಮಲೆ ಪಾಳೆಯಗಾರರು ತಮ್ಮ ಸಮಕಾಲಿನ ಇತರ ಸಂಸ್ಥಾನಿಕರೊಡನೆ ಬಾಂಧವ್ಯ ಇರಿಸಿಕೊಂಡಿದ್ದರು. ಸುರಪುರ ಮೊದಲಾದ ಕೆಲವು ಬೇಡನಾಯಕ ಸಂಸ್ಥಾನಿಕರೊಡನೆಯೂ ಸಂಬಂಧವನ್ನು ಇರಿಸಿಕೊಂಡಿದ್ದರು. ಅದರಲ್ಲಿ ಮುಖ್ಯರಾದವರು ಚಿತ್ರದುರ್ಗ ಸಂಸ್ಥಾನಿಕರು. ಅಲ್ಲದೆ ಆಂಧ್ರಪ್ರದೇಶದ ಪಾಳೆಯಗಾರರ ಪೈಕಿಸುಂಡಿ (ಪ್ರಕಾಶಂ ಜಿಲ್ಲೆ)ಯ ಪಾಳೆಯಗಾರರೊಂದಿಗೂ ಕೊಡೇಕಲ್ಲು, ವೈ.ಎನ್. ಹೊಸಕೋಟೆ, ಶಂಕರಗಲ್ಲು (ಮಡಶಿರ ತಾ), ನಾಯಕನಹಟ್ಟಿ ಮೊದಲಾದ ಪಾಳೆಯಗಾರರ ಸಂತತಿಯವರೊಂದಿಗೂ ಇತಂಹ ಬಾಂಧವ್ಯವಿದ್ದಿತು. ಈಗಲೂ ಈ ಕೆಲವು ಮನೆತನಗಳೊಡನೆ ಇದು ಮುಂದುವರೆದಿದೆ. ಈ ಚಿತ್ರದುರ್ಗ ಸಂಸ್ಥಾನದೊಡನೆ ಸ್ನೇಹವನ್ನು ವಿರೋಧವನ್ನು ಇಟ್ಟುಕೊಂಡಿದ್ದರೆನ್ನುವುದಕ್ಕೆ ಹಲವು ಉದಾಹರಣೆಗಳಿವೆ. ಜರಿಮಲೆ ನಾಯಕರು, ಚಿತ್ರದುರ್ಗ ಅರಸನಿಗೆ ಸಿದ್ಧಮ್ಮ ನಾಗತಿ ಎಂಬ ಕನ್ಯೆಯನ್ನು ಕೊಟ್ಟು ಮದುವೆ ಮಾಡಿದ್ದರು. ಆದರೆ ರಾಜಕೀಯವಾಗಿ ವಿರೋಧವೂ ಮುಂದುವರೆದಿದ್ದಿತು. ಕ್ರಿ.ಶ. ೧೬೭೫ರಿಂದ ೧೬೮೬ರವರೆಗೆ ಚಿತ್ರದುರ್ಗದ ಅರಸನಾಗಿದ್ದ ಚಿಕ್ಕಣ್ಣನಾಯಕನು ಕ್ರಿ.ಶ. ೧೬೮೫ರಲ್ಲಿ ಉಜ್ಜಯನಿಯನ್ನು ಮುತ್ತಿ ತೆಗೆದುಕೊಂಡ ಇದಾದ ಎರಡು ತಿಂಗಳುಗಳ ನಂತರ ಹರಪನಹಳ್ಳಿಯವರು ಅದನ್ನು ವಶಪಡಿಸಿಕೊಂಡು ಅಲ್ಲಿಯ ಕೋಟೆಯಲ್ಲಿದ್ದ ಜರಿಮಲೆಯ

ಬೊಮ್ಮಣ್ಣನನ್ನು ಕರೆದುಕೊಂಡು ಹೋಗಿ ಬಿದನೂರಿನಲ್ಲಿಟ್ಟರೆಂದು ೩-೪ ತಿಂಗಳುಗಳ ನಂತರ ಈ ಕುಮಾರನನ್ನು ಬಿಟ್ಟು ಕಳುಹಿಸಿದರೆಂದು ಚಿತ್ರದುರ್ಗ ಅರಸರ ವಂಶಾವಳಿ ಹೇಳುತ್ತದೆ.

ಕ್ರಿ.ಶ. ೧೬೮೯ ರಿಂದ ೧೭೨೧ರ ವರೆಗೆ ದುರ್ಗವನ್ನು ಪಾಲಿಸಿದ ಪ್ರಸಿದ್ಧ ಅರಸ ಬಿಚ್ಚುಗತ್ತಿ ಭರಮಣ್ಣನಾಯಕನು ತಾನು ಪಟ್ಟಕ್ಕೆ ಬಂದ ವರ್ಷವೇ ಹರಪನಹಳ್ಳಿಯವರ ವಿರುದ್ಧ ಅಣಜಿ ಬಳಿ ನಡೆದ ಯುದ್ಧದಲ್ಲಿ ಜಯ ಸಂಪಾದಿಸಿದ ಜರಿಮಲೆ ಪಾಳೆಯಗಾರನೂ ಈ ಯುದ್ಧದಲ್ಲಿ ನೆರವಾದ, ರಾಯದುರ್ಗದವರ ವಿರುದ್ಧ ಯುದ್ಧ ಹೂಡಿದಾಗಲೂ ಜರಿಮಲೆ ಪಾಳೆಯಗಾರನು ಸಹ ಅವನಿಗೆ ಸಹಾಯ ನೀಡಿದ. ಆದರೆ ಕ್ರಮೇಣ ಚಿತ್ರದುರ್ಗ ಮತ್ತು ಜರಿಮಲೆ ನಾಯಕರ ನಡುವೆ ವೈರತ್ವ ಸೃಷ್ಠಿಯಾಯಿತು. ಕ್ರಿ.ಶ. ೧೭೪೨ರಲ್ಲಿ ದುರ್ಗದವರು ಜರಿಮಲೆ ನಾಯಕನಿಂದ ಸಾಕಷ್ಟು ಸುಲಿಗೆ ಮಾಡಿದರು. ಅದೇ ವರುಷ ಹರಪನಹಳ್ಳಿಯ ಸೋಮಶೇಖರ ರಾಯನು ಜರಿಮಲೆಯ ಸಂಸ್ಥಾನಕ್ಕೆ ಸೇರಿದ ಬಹುಮುಖ್ಯ ಪ್ರದೇಶವಾದ ಉಜ್ಜಯನಿಯನ್ನು ವಶಪಡಿಸಿಕೊಂಡ. ಇದರಿಂದ ಜರಿಮಲೆಯವರಿಗೆ ಆದ ನೋವು ಅವರ್ಣನೀಯ. ಈ ಸೋಲು ಅವರ ಧಾರ್ಮಿಕ ಆಚರಣೆಯ ಮೇಲೆ ಸಾಕಷ್ಟು ಪರಿಣಾಮ ಬೀರಿತು.

ಕ್ರಿ.ಶ. ೧೭೫೪ರಿಂದ ೧೭೭೯ರವರೆಗೆ ಆಳ್ವಿಕೆ ನಡೆಸಿದ ರಾಜಾವೀರ ಮದಕರಿನಾಯಕನು ಚಿತ್ರದುರ್ಗ ರಾಜ್ಯದ ಪ್ರಭಾವವನ್ನು ಹೆಚ್ಚಿಸಲು ಕಾರಣನಾದ. ಇವನ ಅವಧಿಯಲ್ಲಿ ರಾಜಕೀಯದಲ್ಲಿ ಜರಿಮಲೆಯವರು ನಿರ್ವಹಿಸಿದ ಪಾತ್ರ ಗಮನೀಯವಾದುದು. ಕ್ರಿ.ಶ. ೧೭೬೭ರಲ್ಲಿ ಹೈದರನು ಚಿತ್ರದುರ್ಗದ ಮೇಲೆ ದಾಳಿಯಿಕ್ಕಿದಾಗ ಅವನಿಗೆ ಸೈನಿಕ ಸಹಾಯ ನೀಡಿದವರಲ್ಲಿ ಜರಿಮಲೆಯ ಪಾಳೆಯಗಾರರ ಇಮ್ಮಡಿ ನಾಯಕನೂ ಇದ್ದ. ಈ ಕಾರಣಕ್ಕಾಗಿ ಅನಂತರ ರಾಜಾವೀರ ಮದಕರಿನಾಯಕನು ಈ ನಾಯಕನನ್ನು ಕೊಲ್ಲಿಸಿದ ಇಮ್ಮಡಿ ನಾಯಕನ ಇಬ್ಬರು ಮಕ್ಕಳು ಹೈದರ್‌ನಲ್ಲಿ ಈ ಸಂಗತಿಯನ್ನು ಪ್ರಸ್ತಾಪಿಸಿದರು. ಈ ಕೆಲವು ಅಂಶಗಳು "ನಲ್ಲಪ್ಪನ ಹೈದರ್‌ನಾಮಾ"ದಲ್ಲಿ ಉಲ್ಲೇಖಗೊಂಡಿವೆ.

ಆದರೆ ಆನಂತರದಲ್ಲಿ ರಾಜಾ ಮದಕರಿಯ ಆಸ್ಥಾನದಲ್ಲಿ ಜರಿಮಲೆಯ ಪಾಳೆಯಗಾರ ಬೊಮ್ಮಣ್ಣನಾಯನು ಉನ್ನತ ಸ್ಥಾನ ಮಾನಗಳನ್ನು ಪಡೆದ ಈ ಬೊಮ್ಮಣ್ಣನನ್ನು "ಚಿತ್ರದುರ್ಗದ ಬಖೈರ್" ಕರ್ತೃಭಿಮೋಜಿ ಪಂದನು 'ರಾಜ' ಎಂದು ಗೌರವದಿಂದ ಸಂಬೋಧಿಸಿದ್ದಾನೆ. ಈ ರಾಜನು ತನ್ನ ಸೇನಾಪಡೆ ಸಹಿತ ಚಿತ್ರದುರ್ಗದ ಅರಸನಿಗೆ ಸಹಾಯ ಮಾಡಿದ.

**ಅಡಿಟಿಪ್ಪಣಿ**

೧. ಲಕ್ಷ್ಮಣ ತೆಲಗಾವಿ, ಜರಿಮಲೆ ಸಂಸ್ಥಾನದ ವಂಶಾವಳಿ (ಸಂ), ಚಂದ್ರವಳ್ಳಿ ಚಿತ್ರದುರ್ಗ, ೧೯೭೬, ಪುಟ–೫೦.

೨. ಅದೇ.

೩. ಶ್ಯಾಮಲಾ ಸಿ.ಆರ್., ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೮, ಪುಟ–೨೮.

೪. ಅದೇ.

೫. ರಾಜಶೇಖರಪ್ಪ ಬಿ., ಚಿತ್ರದುರ್ಗ ನಾಯಕರು ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ–೧೦೧.

೬. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗ ಪಾಳೆಯಗಾರರು, ಪುನರ್ ಮುದ್ರಣ ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೯೭, ಪುಟ–೪೨.

೭. ಯೋಗೀಶ್ವರಪ್ಪ ಡಿ.ಎನ್., ಜರಿಮಲೆ ನಾಯಕರು, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ–೨, ಬೆಂಗಳೂರು, ೨೦೦೨, ಪುಟ–೩೮.

೮. ಅರಣಿ ಎಸ್.ಕೆ., ಸುರಪುರ ಸಂಸ್ಥಾನದ ಇತಿಹಾಸ ಮತ್ತು ಸಂಸ್ಕೃತಿ, ೧೯೯೮.

೯. ಜರಿಮಲೆ ಸಂಸ್ಥಾನದ ವಂಶಾವಳಿ, ೧೯೭೬.

೧೦. ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿ ಪಾಳೆಯಗಾರರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೬, ಪುಟ–೧೫.



# ಅಧ್ಯಾಯ : ಆರು

# ಸಮಾರೋಪ

**ಅನುಬಂಧಗಳು**

ಮೂಲ ಆಕರಗಳು

ಪರಾಮರ್ಶನ ಗ್ರಂಥಗಳು

ಲೇಖನಗಳು

ನಕ್ಷೆಗಳು

ಛಾಯಾಚಿತ್ರಗಳು

# ಅಧ್ಯಾಯ : ಆರು

# ಸಮಾರೋಪ

ವಿಜಯನಗರದ ಅರಸರ ಕಾಲದಲ್ಲಿ ವಿಸ್ತಾರವಾಗಿದ್ದ ಸಾಮ್ರಾಜ್ಯದ ಸುಗಮವಾದ ಆಡಳಿತಕ್ಕಾಗಿ, ಅವರು ಅಲ್ಲಲ್ಲಿಯ ಮಾಂಡಲಿಕರು, ಸಾಮಂತರುಗಳಿಲ್ಲದೆ ಕೆಲವು ಶೂರ, ಸಾಹಸಿ ಬೇಡರುಗಳಿಗೆ ಭೂದಾನ ನೀಡಿ, ಸ್ಥಾನಿಕ ಪ್ರಭುಗಳನ್ನಾಗಿ ನೇಮಿಸಿದರು. ಈ ಸ್ಥಾನಿಕ ಪ್ರಭುಗಳು ಸೈನ್ಯವನ್ನು ಕಟ್ಟಿಕೊಂಡು ಪಾಳ್ಯಗಳಲ್ಲಿ ನಿಲ್ಲುತ್ತಿದ್ದುರಿಂದ ಇವರನ್ನು 'ಪಾಳೆಯಗಾರರು' ಎಂದು ಸಂಬೋಧಿಸುತ್ತಿದ್ದರು. ಹೊಸ ರಾಜ್ಯಗಳನ್ನು ಗೆಲ್ಲಲು, ಇಸ್ತರಿಸಲು ಸಾಮ್ರಾಜ್ಯದಲ್ಲಿ ಶಾಂತಿ ಸಮೃದ್ಧಿ ನೆಲೆಸಲು, ಆಡಳಿತ ಸುಗಮವಾಗಿ ಸಾಗಲು ವಿಜಯನಗರದ ಅರಸರಿಗೆ ಜರಿಮಲೆ ಪಾಳೆಯಗಾರರು ಸಹಾಯಕರಾಗಿದ್ದಲ್ಲದೆ, ಅವರಿಗೆ ಅಧೀನರಾಗಿದ್ದು ಮಧ್ಯಯುಗೀನ ದಕ್ಷಿಣ ಭಾರತದ ಚರಿತ್ರೆಯಲ್ಲಿ ಮಹತ್ವ ಪಾತ್ರವನ್ನು ವಹಿಸಿದ್ದರು.

ವಿಜಯನಗರದ ಸ್ಥಾಪನೆಗೆ ಮೊದಲೇ ಪ್ರಬಲರಾದ ಕೆಲವು ಪಾಳೆಯಗಾರರು ಪಾಳೆಯಪಟ್ಟುಗಳನ್ನು ಕಟ್ಟಿದ್ದರೆಂಬುದು ಹಾಗೂ ಅಂತಹ ಪಾಳೆಯಪಟ್ಟುಗಳಲ್ಲಿ ಜರಿಮಲೆ ಪಾಳೆಯಪಟ್ಟು ಸಹ ಒಂದಾಗಿತ್ತು ಎಂಬುದು ಕರ್ನಾಟಕದ ಇತಿಹಾಸದಿಂದ ತಿಳಿಯುತ್ತದೆ. ಜರಿಮಲೆ ಪಾಳೆಯಗಾರರು ಬೇಡ, ನಾಯಕ, ಪಾಳೆಯಗಾರರು ಎಂದೆಲ್ಲಾ ಕರೆದುಕೊಂಡು ರಾಜರಂತೆ ಆಳತೊಡಗಿದರು. ಜರಿಮಲೆ ಪಾಳೆಯಗಾರರು ಕರ್ನಾಟಕದ ಇತರ ಪಾಳೆಯಗಾರರಿಗಿಂತ ಭಿನ್ನವಾಗಿದ್ದು ತಮ್ಮ ರಾಜ್ಯದ ಕೀರ್ತಿಯನ್ನು ಶಿಖರಕ್ಕೇರಿಸಿದರೆಂದರೆ ತಪ್ಪಾಗಲಾರದು. ಜರಿಮಲೆ ಪಾಳೆಯಗಾರರು ವೀರವರ್ಗಕ್ಕೆ ಸೇರಿದವರು, ಪರಾಕ್ರಮಿಗಳು, ಶತ್ರುಗಳಿಗೆ ಭಯಂಕರರಾಗಿದ್ದು ಆಶ್ರಯಿಸಿದವರನ್ನು ಕಾಪಾಡುತ್ತಿದ್ದರು. ಜರಿಮಲೆ ಪಾಳೆಯಗಾರರು ಚಿತ್ರದುರ್ಗದ ಮತ್ತು ಹರಪನಹಳ್ಳಿಯ ಪಾಳೆಯಗಾರರ ಜೊತೆಗೆ ಪರಸ್ಪರ ಸಂಬಂಧ ಅಂದರೆ ವೈವಾಹಿಕ, ಧಾರ್ಮಿಕ ಯುದ್ಧದ ಸಂಬಂಧಗಳನ್ನು ಹೊಂದಿದ್ದರು. ಜರಿಮಲೆಯ ಪಾಳೆಯಗಾರರು ತಮ್ಮ ಕನ್ಯೆಯರನ್ನು ಚಿತ್ರದುರ್ಗದ ಪಾಳೆಯಗಾರರಿಗೆ ಕೊಟ್ಟು ಅವರೊಡನೆ, ಸಂಬಂಧವನ್ನು ಬೆಳೆಸಿದ್ದರು. ಜರಿಮಲೆ ಪಾಳೆಯಗಾರರು ರಾಜಕೀಯವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಕರ್ನಾಟಕದ

ಕೀರ್ತಿಯನ್ನು ಹಾಗೂ ಜರಿಮಲೆ ಸಂಸ್ಥಾನ ಕೀರ್ತಿಪತಾಕೆಯನ್ನು ಎಲ್ಲೆಡೆಗೂ ಹರಡುವಂತೆ ಮಾಡಿದರು. ಅಲ್ಲದೆ ತಮ್ಮ ನಾಡಿನ ರಕ್ಷಣೆಗೆ ಶ್ರಮಿಸಿದರು.

ಜರಿಮಲೆಯ ಪಾಳೆಯಗಾರರು ಹೈದರಾಲಿ, ಟಿಪ್ಪುವಿನ ಜೊತೆಗೆ ಸಮಾರೋಪ ಸ್ನೇಹವನ್ನು ಯಾಚಿಸಿ, ಸ್ನೇಹ ಹಸ್ತವನ್ನು ಮುನ್ನೀಡಿದ್ದರು. ಕೊನೆಗೆ ಚಿತ್ರದುರ್ಗದ ಪಾಳೆಯಗಾರರ, ಹರಪನಹಳ್ಳಿ ಪಾಳೆಯಗಾರರ ಹೈದರಾಲಿ, ಟಿಪ್ಪುಸುಲ್ತಾನ, ಮರಾಠ ಹಾಗೂ ಇಂಗ್ಲೀಷರನ್ನು ಧೈರ್ಯವಾಗಿ ಎದುರಿಸಿ, ತಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ಒಳಗಿನ ಶತ್ರುಗಳ ಕುತಂತ್ರದಿಂದ ಸೋತು ಕೊನೆಯುಸಿರೆಳೆದರು.

ಜರಿಮಲೆಯ ಪಾಳೆಯಗಾರರು ರಾಜ್ಯಾಡಳಿತದ ಮೂಲತತ್ವವು ಒಂದೇ ಆಗಿದ್ದಿತು. ಕಾಲಕ್ಕೆ ತಕ್ಕಂತೆ ತಮಗೆ ಅನುಕೂಲವಾಗುವಂತೆ, ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡು ನೀತಿಶಾಸ್ತ್ರಗಳಲ್ಲಿ ಹೇಳಿರುವಂತೆಯೇ ಅಂದರೆ ನ್ಯಾಯ, ಧರ್ಮಗಳ ಅನುಸಾರವಾಗಿ ಆಡಳಿತ ಕ್ರಮವನ್ನು ಅನುಸರಿಸಿದ್ದಾರೆ. ಜರಿಮಲೆಯ ಪಾಳೆಯಗಾರರು ವಿಜಯನಗರದ ಅರಸರುಗಳಿಗೆ ಕಪ್ಪವನ್ನು, ಯುದ್ಧಕಾಲದಲ್ಲಿ ಸೈನ್ಯವನ್ನು ಒದಗಿಸುತ್ತಾ, ವಿಧೇಯರಾಗಿದ್ದು, ಅವರಂತೆಯೇ ಆಡಳಿತ ಕ್ರಮವನ್ನು ಅನುಸರಿಸುತ್ತಿದ್ದರು. ಇವರು ಸಪ್ತಾಂಗಸೂತ್ರ ಎಂದರೆ, ರಾಜ, ಮಂತ್ರಿಮಂಡಲ, ಪ್ರಾಂತಾಡಳಿತ, ಕೋಶ, ಬಲ, ದುರ್ಗ ಹಾಗೂ ನ್ಯಾಯಾಂಗದ ಪದ್ಧತಿಯ ಮೇರೆಗೆ ನಡೆಸಿ ಹೋಗುತ್ತಿದ್ದರು. ಅಲ್ಲದೆ ಆಡಳಿತ ಕ್ರಮ ಸುಲಭವಾಗಲು ಆಡಳಿತ ಕ್ರಮವನ್ನು, ಕೇಂದ್ರಾಡಳಿತ, ರಾಜಾಡಳಿತ, ಊರಾಡಳಿತ ಹಾಗೂ ಗ್ರಾಮಾಡಳಿತಗಳೆಂದು ಮಾಡಿಕೊಂಡಿದ್ದರು. ಗ್ರಾಮಾಧಿಕಾರಿಗಳು, ಊರಾಧಿಕಾರಿಗಳು ಹಾಗೂ ರಾಜ್ಯಾಧಿಕಾರಿಗಳು ಅವರು ಕೇಂದ್ರ ಅಧಿಕಾರಿಗಳಿಗೂ ಉತ್ತರಿಸಬೇಕಾಗುತ್ತಿತ್ತು. ಕೇಂದ್ರಾಡಳಿತದಲ್ಲಿ ಪಾಳೆಯಗಾರ ಅವನ ನಾಗತಿಯರು, ಕುಮಾರರು, ಮಂತ್ರಿಮಂಡಲ, ರಾಜಗುರುಗಳು ಇರುತ್ತಿದ್ದರು. ಮಂತ್ರಿಮಂಡಲದಲ್ಲಿ ಅಮಾತ್ಯ, ಪುರೋಹಿತ, ಸೇನಾಧಿಪತಿ, ಸಂಧಿವಿಗ್ರಹಿ, ದಂಡನಾಯಕ, ದ್ವಾರನಾಯಕ, ಅಂಗರಕ್ಷಕ, ದೂತ, ನ್ಯಾಯಾಧೀಶ ಹಾಗೂ ಇತರೆ ಅಧಿಕಾರಿಗಳಿರುತ್ತಿದ್ದರು. ಇವರ ಆಸ್ಥಾನಗಳಲ್ಲಿ ರಾಜಗುರುಗಳಿಗೆ ಮುಖ್ಯ ಸ್ಥಾನವಿತ್ತು. ಅವರು ರಾಜಕೀಯದಲ್ಲೂ, ಜ್ಯೋತಿಷ್ಯಶಾಸ್ತ್ರದಲ್ಲೂ, ಇತರ ಅನೇಕ ಶಾಸ್ತ್ರಗಳಲ್ಲಿಯೂ ಪ್ರವೀಣರಾಗಿರುತ್ತಿದ್ದರು. ರಾಜನು ಬಂದು ಸಲಹೆಗಳನ್ನು ರಾಜಕೀಯ ಅಥವಾ ವ್ಯಕ್ತಿಗತ ಕೇಳಿದಾಗ ಮಾತ್ರ ಅವನಿಗೆ ಸಮಾಧಾನದ ಉತ್ತರವನ್ನು ಕೊಡುತ್ತಿದ್ದರು. ರಾಜನೇ ನ್ಯಾಯಾಂಗದ ಮುಖ್ಯಾಧಿಕಾರಿ ಆಗಿರುತ್ತಿದ್ದನು. ನ್ಯಾಯದ ತೀರ್ಪನ್ನೀಯುವಾಗ, ತನಗೆ ಅಧಿಕಾರವಿದ್ದರೂ, ನ್ಯಾಯಾಂಗದ ಇತರ ಅಧಿಕಾರಿಗಳೊಡನೆ ಚರ್ಚಿಸಿ, ತೀರ್ಪನ್ನು ಕೊಡುತ್ತಿದ್ದನು.

ಕೆಲವೊಮ್ಮೆ ಬ್ರಾಹ್ಮಣರ ಸಲಹೆಯನ್ನು ಕೇಳುತ್ತಿದ್ದನು. ನ್ಯಾಯಾಂಗದ ತೀರ್ಪಿನಲ್ಲಿ ತಳವಾರ, ಬಾಗಿಲು ಕಾಯುವವನು, ದೂತರು ಮೊದಲಾದವರು ಕೆಲವೊಮ್ಮೆ ಭಾಗವಹಿಸಬೇಕಾಗುತ್ತಿತ್ತು. ಸಣ್ಣ ಪುಟ್ಟ ವ್ಯಾಜ್ಯಗಳು, ತಮ್ಮ ಗ್ರಾಮಗಳಲ್ಲಿ ಅಥವಾ ಊರುಗಳಲ್ಲಿಯೇ ತೀರ್ಮಾನವಾಗುತ್ತಿತ್ತು.

ದೊಡ್ಡ ದೊಡ್ಡ ವ್ಯಾಜ್ಯಗಳು ಅಥವಾ ಗ್ರಾಮಗಳಲ್ಲಿ ನಿರ್ಧರಿಸಲಾಗದ ವ್ಯಾಜ್ಯಗಳು ಸಂಸ್ಥಾನದಲ್ಲಿ ನಾಯಕನ ಮುಂದೆ ತೀರ್ಮಾನವಾಗುತ್ತಿತ್ತು. ಇವರಲ್ಲದೆ ಬೊಕ್ಕಸದ ಅಧಕಾರಿ, ಕೋಶಾಧಿಕಾರಿ, ಸುಂಕದ ಅಧಿಕಾರಿ ಮುಂತಾದ ಇತರೇ ಅಧಿಕಾರಿಗಳು ಇರುತ್ತಿದ್ದರು. ರಾಜ್ಯಾಡಳಿತವನ್ನು ಪ್ರಾಂತಾಡಳಿತ, ನ್ಯಾಯಾಡಳಿತವೆಂದೂ ಹೇಳುತ್ತಿದ್ದರು. ಇದರಲ್ಲಿ ಕೆಲವು ವಿಭಾಗ ಉಪವಿಭಾಗಗಳಿರುತ್ತವೆ. ಇದರ ನಂತರ ಬರುವುದು ಊರಾಡಳಿತ, ಪಟ್ಟಣ ಅಗ್ರಹಾರ, ಊರು, ಕಂಪಣ, ಮಾಗಣಿ ಮೊದಲಾದವು ಊರಾಡಳಿತದ ಮುಖ್ಯ ಘಟಕಗಳಾಗಿದ್ದವು. ಗ್ರಾಮವು ರಾಜ್ಯಾಡಳಿತದ ಅತ್ಯಂತ ಸಣ್ಣ ಘಟಕವಾಗಿದ್ದು ಗ್ರಾಮಾಡಳಿತದಲ್ಲಿ ಜರಿಮಲೆ ಪಾಳೆಯಗಾರರು ತಮ್ಮದೇ ಆದ ಗ್ರಾಮ ಇಟ್ಟುಕೊಂಡು, ಅವುಗಳಿಗೆ ಸಹಕಾರ ನೀಡುತ್ತವೆ. ಕೇಂದ್ರಾಡಳಿತದಲ್ಲಿ ಮಂತ್ರಿಮಂಡಲವಿದ್ದಂತೆ ಗ್ರಾಮಾಡಳಿತದಲ್ಲಿ ಆಯಗಾರ ಪದ್ಧತಿ ಇರುತ್ತಿತ್ತು.

ಆಡಳಿತಕ್ಕೆ ಆರ್ಥಿಕ ವ್ಯವಸ್ಥೆ ಬೆನ್ನೆಲುಬಾಗಿರಬೇಕು. ಆರ್ಥಿಕ ವ್ಯವಸ್ಥೆ ಸರಿಯಾಗಿರಬೇಕು. ಆಡಳಿತ ಸುಸೂತ್ರವಾಗಿ ನಡೆಯಬೇಕಿದ್ದರೆ, ರಾಜಕೋಶ ತುಂಬಿರಬೇಕು. ಇದಕ್ಕೆ ವನಸ್ಪತಿ, ಭೂಮಿ, ಪ್ರಾಣಿಗಳ ಸಂಪತ್ತು ಸಹಾಯಕವಾಗಿರುತ್ತದೆ. ಅದಕ್ಕೆ ರಾಜ್ಯದ ವ್ಯಾಪಾರ, ಸುಂಕ, ತೆರಿಗೆ ಮೊದಲಾದವುಗಳು ವ್ಯವಸ್ಥಿತವಾಗಿರಬೇಕು. ಜರಿಮಲೆ ಪಾಳೆಯಗಾರರು ಭೂ ಒಡೆತನಗಳನ್ನು ಕೊಟ್ಟಿದ್ದುದರಿಂದ ಗೇಣಿದಾರ ಜೀತದಾಳುಗಳ ವರ್ಗ ಹುಟ್ಟಿಕೊಂಡವು. ಈ ಸಂಸ್ಥಾನಕ್ಕೆ ಹೊರಗಿನಿಂದ ವ್ಯಾಪಾರಿಗಳು ಬಂದು ಇಲ್ಲಿ ವ್ಯಾಪಾರ ಮಾಡುತ್ತಿದ್ದುದರಿಂದ ಈ ಸಂಸ್ಥಾನದ ಆರ್ಥಿಕ ಸ್ಥಿತಿ ಉತ್ತಮಗೊಂಡುದಲ್ಲದೆ, ಇಲ್ಲಿಯ ಸಂಸ್ಕೃತಿಯು ಹೊರಗಿನವರಿಗೆ ಪರಿಚಯವಾಗಿ ಸ್ನೇಹ ಸಂಬಂಧಗಳು ಬೆಳೆಯುತ್ತಿದ್ದವು. ಅಲ್ಲದೆ ವ್ಯಾಪಾರ ಹೆಚ್ಚಿದಂತೆ ಸಾಗುವಳಿಯ ಅನುಕೂಲಕ್ಕಾಗಿ ರಸ್ತೆಗಳೂ, ಬೀದಿಗಳೂ ಹುಟ್ಟಿಕೊಂಡವು. ಹಾಗೂ ವರ್ತಕರು ತಮ್ಮ ರಕ್ಷಣೆಗಾಗಿ, ಸಂಪತ್ತಿನ ರಕ್ಷಣೆಗಾಗಿ ಸೈನಿಕರನ್ನು ಇಟ್ಟುಕೊಂಡಿದ್ದರು. ಈ ವ್ಯಾಪಾರಿ ಸಂಘಗಳು ಕ್ಷಾಮ, ಅತಿವೃಷ್ಟಿ, ಯುದ್ಧ ಮೊದಲಾದ ಅಪತ್ಕಾಲದಲ್ಲಿ ರಾಜನಿಗೆ ಧನಸಹಾಯದ ಜೊತೆಗೆ ಇತರ ಸಹಾಯವನ್ನು ಮಾಡುತ್ತಿದ್ದರು. ಜರಿಮಲೆ ಪಾಳೆಯಗಾರರು ಭೂಮಿಯ ಅಳತೆ, ಅದನ್ನು ಅಳೆಯುವ ಪದ್ಧತಿ, ತೂಕಗಳು ನಾಣ್ಯಗಳ ಅಳತೆ ತೂಕಗಳು, ಪ್ರತಿಯೊಂದರ ಕಡೆಗೂ ಲಕ್ಷ್ಯವಿಟ್ಟು ಗೊತ್ತುಪಡಿಸಿದರು. ತೆರಿಗೆ, ಸುಂಕಗಳೊಂದಿಗೆ ದಂಡ ಹಾಗೂ ದೋಷ ಕಾಣಿಕೆಗಳೂ ಇದ್ದವು. ಇವುಗಳು ರಾಜಕೋಶವನ್ನು ತುಂಬುವ ಆದಾಯಗಳೆಂದೇ ಹೇಳಬಹುದು. ಜರಿಮಲೆ ಪಾಳೆಯಗಾರರು ಧರ್ಮವನ್ನು ಅನುಸರಿಸಿ ಅದಕ್ಕೆ ಪ್ರೋತ್ಸಾಹವನ್ನು ನೀಡುತ್ತಿದ್ದರು. ಇದಕ್ಕೆ ಕಾರಣ ರಾಜಕೀಯ ಹಾಗೂ ಧರ್ಮ ಒಂದೇ ನಾಣ್ಯದ ಎರಡು ಮುಖಗಳಾಗಿರುವುದು. ರಾಜರಂತೆ ಅವರ ಅಧಿಕಾರಿಗಳೂ ಸಾಮಂತರೂ ಯಾವುದಾದರೊಂದು ಧರ್ಮವನ್ನು ಅವಲಂಬಿಸಿರುವುದು ತಿಳಿದುಬರುತ್ತದೆ.

ಧಾರ್ಮಿಕ ವಿಷಯದಲ್ಲಿ ಜರಿಮಲೆ ಪಾಳೆಯಗಾರರು ಯಾವುದೇ ರೀತಿಯ ಭೇದ ಭಾವವನ್ನು ತೋರಿಸದೇ ಎಲ್ಲಾ ಧರ್ಮಗಳನ್ನು ಸಮಾನ ಭಾವದಿಂದ ನೋಡಿಕೊಳ್ಳುತ್ತಿದ್ದರು.

ಅವರ ಆಡಳಿತದಲ್ಲಿ ಎಲ್ಲಾ ಧರ್ಮದ ಅಧಿಕಾರಿಗಳು ಇದ್ದರು. ಇವರು ಶೈವ ದೇವಾಲಯಗಳನ್ನು ನಿರ್ಮಿಸಿದರು. ಧರ್ಮ ಬೆಳವಣಿಗೆಗಾಗಿ ಹಲವಾರು ದೇವಾಲಯಗಳನ್ನು ಕಟ್ಟಿಸಿದರು. ಅವುಗಳಲ್ಲಿ ಪೂಜೆ, ಉತ್ಸವ, ಅಂಗರಂಗ ವೈಭೋಗಗಳು, ಜೀರ್ಣೋದ್ಧಾರದ ವ್ಯವಸ್ಥೆಗಾಗಿ ಅನೇಕ ದಾನ ದತ್ತಿಗಳನ್ನು ಕೊಟ್ಟಿದ್ದಾರೆ. ಜರಿಮಲೆ ಪಾಳೆಯಗಾರರು ವೀರಶೈವ ಗುರುಗಳ ಮೇಲಿನ ಭಕ್ತಿ ಗೌರವಗಳಿಗಾಗಿ ಮಠಗಳನ್ನು ಕಟ್ಟಿಸಿದ್ದಾರೆ. ಮಠಗಳು ವಿದ್ಯಾಕೇಂದ್ರಗಳು ಆಗಿದ್ದವು. ಈ ಮಠಗಳು ಹಾಗೂ ದೇವಸ್ಥಾನಗಳು ರಾಜ ಮತ್ತು ಪ್ರಜೆಗಳ ನಡುವಿನ ಕೊಂಡಿಯಂತಿದ್ದು ಸಮಾಜದ ಪ್ರತೀಕವಾಗಿದ್ದವು.

ಜರಿಮಲೆ ಪಾಳೆಯಗಾರರ ಕಾಲದಲ್ಲಿ ಸಮಾಜವು ಜಾತಿ ಪದ್ಧತಿಯ ಮೇಲೆ ರೂಪುಗೊಂಡಿದ್ದಿತು. ಒಂದು ನಾಡಿನ ಅಭಿವೃದ್ಧಿಗೆ, ಶ್ರಮಿಕ ವರ್ಗದ ಶ್ರಮ ಬಹಳವಾಗಿರುತ್ತದೆ. ಅದರಂತೆ ಇಲ್ಲಿಯೂ ಶ್ರಮಿಕ ವರ್ಗದವರು ತಮ್ಮ ವಿವಿಧ ವೃತ್ತಿಗಳಿಂದ, ತಮ್ಮ ಸಮಾಜಕ್ಕೆ, ತಮ್ಮ ಕಾಣಿಕೆಯನ್ನು ಅರ್ಪಿಸಿದ್ದಾರೆ. ಅಕ್ಕಸಾಲಿಗ, ಬಡಗಿ, ಕಮ್ಮಾರ, ಕುಂಬಾರ, ಶಿಲ್ಪಿ, ಅಗಸ, ಕಂಚುಗಾರ, ಉಪ್ಪಾರ, ಮಾದಿಗ, ಕಲ್ಲುಕುಟಿಗ, ಬೇಡ, ಗೊಲ್ಲ ಮುಂತಾದ ಶ್ರಮಿಕ ವರ್ಗದವರು ತಮ್ಮ ವಂಶ ಪಾರಂಪರ್ಯವಾಗಿ ಬಂದ ವೃತ್ತಿ ವೈಶಿಷ್ಟ್ಯವನ್ನು ಉಳಿಸಿಕೊಳ್ಳುವ ಭಿನ್ನತೆಯೇ ಜಾತಿ ವ್ಯವಸ್ಥೆಗೆ ದಾರಿ ಮಾಡಿಕೊಟ್ಟಿತು. ಸಮಾಜದ ವಿವಿಧ ಅಂಗಗಳಲ್ಲಿ ಕುಟುಂಬ ಒಂದು ಮೂಲಭೂತ ಸಂಸ್ಥೆ. ಇದರಲ್ಲಿ ವಿವಾಹ, ಬಳುವಳಿ, ಕನ್ಯಾಶುಲ್ಕ, ಬಹುಪತ್ನಿತ್ವದ ದಾಂಪತ್ಯ, ಸಂತಾನ, ಸತಿಪದ್ಧತಿ, ಬಲಿದಾನ, ಶವಸಂಸ್ಕಾರ ಮುಂತಾದವು ಸಮಾಜದ ಅಂಗಗಳಾಗಿವೆ. ಇವುಗಳನ್ನು ಸಮಾಜದ ಸ್ತ್ರೀ ಪುರುಷರು, ಅನುಸರಿಸುತ್ತಾ, ಸಮಾಜದ ಕೆಲಸವು ಸುಗಮವಾಗುವಂತೆ ಮಾಡಿದ್ದಾರೆ. ಜರಿಮಲೆ ಪಾಳೆಯಗಾರರ ಕಾಲದಲ್ಲಿ ಸ್ತ್ರೀಯರಿಗೂ ಸಮಾನವಾದ ಸ್ಥಾನಮಾನವಿದ್ದಿತು. ಅಲ್ಲದೆ ಪಾಳೆಯಗಾರರು ಆಚರಿಸುವ ಹಬ್ಬ-ಹರಿದಿನಗಳೂ ಸಮಾಜದ ಐಕ್ಯತೆಗೆ, ಒಗ್ಗಟ್ಟಿಗೆ ಕಾರಣವಾಗುತ್ತದೆ. ಇದರಿಂದ ಅವುಗಳನ್ನು ಆಚರಿಸುವಂತೆ ಉತ್ಸವಗಳನ್ನು, ಪಂದ್ಯಗಳನ್ನು ನಡೆಸುವಂತೆ ಪ್ರೋತ್ಸಾಹ ಕೊಡುತ್ತಿದ್ದರು. ಅದಕ್ಕಾಗಿ ದೇವಸ್ಥಾನಗಳನ್ನೂ, ಮಠಗಳನ್ನೂ ಕಟ್ಟಿಸುತ್ತಿದ್ದರು. ಇವು ವಿದ್ಯಾಕೇಂದ್ರಗಳು, ಮನೋರಂಜನಾ ಕೇಂದ್ರಗಳು, ಧರ್ಮ ಪ್ರಚಾರಕ ಕೇಂದ್ರಗಳೂ ಆಗಿದ್ದವು. ಜರಿಮಲೆ ಪಾಳೆಯಗಾರರು ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಂತೆ ಸಾಹಿತ್ಯ ಕ್ಷೇತ್ರಕ್ಕೂ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಇವರು ಪಂಡಿತರುಗಳಿಗೂ, ಸಾಹಿತಿಗಳಿಗೂ, ಕವಿಗಳಿಗೂ ಆಶ್ರಯ ನೀಡಿ ಅವರಿಂದ ಉತ್ತಮವಾದ ಕೃತಿಗಳು ರಚನೆಯಾಗುವುದಕ್ಕೆ ಪ್ರೋತ್ಸಾಹಿಸಿದ್ದಾರೆ. ಇವರ ಕಾಲದಲ್ಲಿ ವೀರಶೈವ ಸಾಹಿತ್ಯಗಳೇ ಹೆಚ್ಚಾಗಿ ಆಗಿರುವುದು ಕಂಡುಬರುತ್ತದೆ. ಇದರಿಂದ ಆ ಕಾಲದಲ್ಲಿ ವೀರಶೈವ ಧರ್ಮ ಹೆಚ್ಚು ಪ್ರಚಲಿತವಾಗಿ, ಜನಪ್ರಿಯವಾಗಿತ್ತೆಂಬುದು ತಿಳಿದುಬರುತ್ತದೆ.

ಜರಿಮಲೆ ಪಾಳೆಯಗಾರರು ವಾಸ್ತುಶಿಲ್ಪದ ವಿಷಯದಲ್ಲಿ ಹೇಳಬೇಕಿದ್ದರೆ, ವಿಜಯನಗರ ಕಾಲದ ವಾಸ್ತುಶಿಲ್ಪದ ಪ್ರಭಾವವೇ ಇವರ ಕಾಲದಲ್ಲಿಯೂ ಮುಂದುವರೆದುಕೊಂಡು ಬಂದಿತ್ತು.

ಅವರಂತೆ, ವಿಶಾಲವಾದ, ಭವ್ಯವಾದ ದೇವಾಲಯಗಳನ್ನು ಕಟ್ಟಿಸದಿದ್ದರೂ, ಇವರ ವಾಸ್ತುಶಿಲ್ಪದ ವೈಶಿಷ್ಟ್ಯ ಕಂಬಗಳ ಮೇಲಿನ ಶಿಲ್ಪ ಕೆತ್ತನೆಗಳು, ಈ ಶಿಲ್ಪಗಳು ಆಗಿನ ಸಮಾಜದ ಪ್ರತಿಬಿಂಬವಾಗಿದ್ದವು. ಆ ಕಾಲದಲ್ಲಿ ನಡೆಯುತ್ತಿದ್ದ ಜನಪದ ಕಲೆಗಳು, ಕುಸ್ತಿ, ನೃತ್ಯಗಳಿಗೆ ಸಾಕ್ಷಿಯಾಗಿ, ಈ ಕಂಬಗಳ ಮೇಲಿನ ಶಿಲ್ಪಗಳಿವೆ. ಸಂಗೀತ ವಾದ್ಯಗಳ, ರಣವಾದ್ಯಗಳ ವೈವಿಧ್ಯತೆಯನ್ನು, ಸೈನಿಕರ ಸ್ಥಾನ ಮಾನಗಳನ್ನು ಅವರ ಯುದ್ಧದ ಆಯುಧಗಳು, ಆನೆ, ಕುದುರೆ, ಒಂಟೆಗಳನ್ನು ದೇವಾಲಯಗಳ ಕಂಬಗಳ ಮೇಲಿನ ಶಿಲ್ಪಗಳಲ್ಲಿ ಕಾಣುವುದರಿಂದ ಜರಿಮಲೆ ಪಾಳೆಯಗಾರರ ಇತಿಹಾಸ ರಚನೆಗೆ ಸಹಾಯವಾಗುತ್ತದೆ. ಜರಿಮಲೆ ಪಾಳೆಯಗಾರರ ಕಾಲದಲ್ಲಿ ದೇವಾಲಯಗಳಿಗೆ ಹೆಚ್ಚಾಗಿ ಗೋಪುರಗಳು ಇರುವುದಿಲ್ಲ. ಕೆಲವು ದೇವಾಲಯಗಳ ಮುಖ್ಯ ದ್ವಾರಗಳಿಗೆ ಗೋಪುರಗಳಿರುವುದನ್ನು ಕಾಣುತ್ತೇವೆ. ದೇವಾಲಯದ ಶಿಲ್ಪವಲ್ಲದೇ, ವೀರಗಲ್ಲುಗಳು, ಸತೀಕಲ್ಲುಗಳು ಆಗಿನ ಶಿಲ್ಪಗಳ ಹೆಚ್ಚಳಿಕೆಯನ್ನು ಎತ್ತಿ ಹಿಡಿಯುತ್ತವೆ. ದೇವಾಲಯಗಳಲ್ಲದೆ ಮಠಗಳೂ ವೈಶಿಷ್ಟ್ಯಪೂರ್ಣವಾಗಿವೆ. ಇದರಂತೆ ಅರಮನೆ ಕೋಟೆಗಳಲ್ಲಿಯೂ ಆಗಿನ ಕಾಲದ ವಾಸ್ತುಶಿಲ್ಪದ ಭವ್ಯತೆಯು ಗೋಚರವಾಗುತ್ತದೆ. ಚೌಕಾಕಾರದ ವರ್ತುಲಾಕಾರದ, ಬುರುಜುಗಳನ್ನು ಕೋಟೆಗಳಿಗೆ ಮೊದಲಿನಿಂದಲೂ ಕಟ್ಟಿಕೊಂಡು ಬಂದಿದ್ದಾರೆ.

ಹೀಗೆ ಜರಿಮಲೆ ಪಾಳೆಯಗಾರರು ತಮ್ಮ ಆಡಳಿತದ ರೀತಿಯನ್ನು ವಿಜಯನಗರದ ಅರಸರ ಮಾದರಿಯನ್ನೇ ಅನುಸರಿಸಿ ರಾಜಕೀಯ, ಆರ್ಥಿಕ, ಧಾರ್ಮಿಕವಾಗಿ ಆಡಳಿತವನ್ನು ನಡೆಸಿದ್ದರೂ, ಆರ್ಥಿಕ ವ್ಯವಸ್ಥೆಯಲ್ಲಿ ಇನ್ನೂ ಸೂಕ್ಷ್ಮಾ ಸೂಕ್ಷ್ಮವಾದ ಕೊಂಡಿಗಳು, ಎಂದರೆ ಕೂಲಿ, ಸಂಬಳ, ವ್ಯಾಪಾರ ರೀತಿ, ವ್ಯವಯದ ಪರಿಮಾಣ ಮುಂತಾದವುಗಳು ಸಿಕ್ಕಿಲ್ಲ. ಅವುಗಳ ಸ್ಪಷ್ಟವಾಗಬೇಕಾಗಿದೆ. ಎಷ್ಟೋ ದೇವಾಲಯಗಳು, ಕೋಟೆಗಳು, ಅರಮನೆಗಳು ನಾಶವಾಗಿ ಕೆಲವು ದುಸ್ಥಿತಿಯಲ್ಲಿರುವ ಕಾರಣ ಅವುಗಳ ಪರಿಚಯ ನಮಗೆ ಈಗ ಆಗುವುದು ಅಸಾಧ್ಯವಾಗಿದೆ. ಕರ್ನಾಟಕದ ಪಾಳೆಯಗಾರರಲ್ಲಿ ಬಳ್ಳಾರಿಯ ಕೂಡ್ಲಿಗಿಯ ಪ್ರಾಂತ್ಯದ ಜರಿಮಲೆ ಪಾಳೆಯಗಾರರು ಚರಿತ್ರೆಯ ರಾಜಕೀಯ, ಆರ್ಥಿಕ, ಧಾರ್ಮಿಕ ಕಲೆ, ಸಾಹಿತ್ಯ ಕ್ಷೇತ್ರದಲ್ಲಿ ಉತ್ತಮವಾದ ಸಾಧನೆ ಮಾಡಿದ್ದಾರೆ ಎಂದು ಹೇಳಬಹುದು.



# ಅನುಬಂಧಗಳು

## Bibilography

Annual Reports of India Epigraph.

Epigraphia Caranatica.

Epigraphia Indica vols.

Indian Archaelogical Report.

Indian Antiquair.

Karnataka Inscriptions vols.

Kannada University Epigraphical SERIES.

Karnataka historical Review-KHR

Mysore Archaelogical Report.

South Indian Inscriptons.

## ಪರಾಮರ್ಶನ ಗ್ರಂಥಗಳು

ಕರ್ನಾಟಕದ ಕೈಫಿಯತ್ತುಗಳು, ಕಲಬುರ್ಗಿ ಎಂ.ಎಂ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಲಕ್ಷ್ಮಣ್ ತೆಲಗಾವಿ

ಕರ್ನಾಟಕದ ಪುರಾತತ್ವ ನೆಲೆಗಳು, ಶಿವತಾರಕ ಕೆ.ಬಿ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಕಲ್ಯಾಣ ಕರ್ನಾಟಕದ ಅರಸರು ಮನೆತನಗಳು, ಕೊಟ್ರೇಶ್ ಎಂ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಕೂಡ್ಲಿಗಿ ತಾಲ್ಲೂಕು ದರ್ಶನ, ಚಂದ್ರಶೇಖರಯ್ಯ ಎಂ., ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೭.

ಕೋಟೆ ಕೊತ್ತಲುಗಳು (ಬಳ್ಳಾರಿ ಜಿಲ್ಲೆ) ಕೊಟ್ರೇಶ್ ಎಂ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ಚಂದ್ರವಳ್ಳಿ ಇತಿಹಾಸ ಸಂಶೋಧನಾ ಮಂಡಳಿ, ಶ್ರೀನಿವಾಸ ಎಂ.ಬಿ., ಲಕ್ಷ್ಮಣ್ ತೆಲಗಾವಿ (ಸಂ), ಚಿತ್ರದುರ್ಗ.

ಚಿತ್ರದುರ್ಗ ನಾಯಕರು ದಕ್ಷಿಣ ಕರ್ನಾಟಕದ ಅರಸುಮನೆತನಗಳು ರಾಜಶೇಖರಪ್ಪ ಬಿ.

ಚಿತ್ರದುರ್ಗ ಪಾಳೆಯಗಾರರು ಪುನರ್ ಮುದ್ರಣ ಕಾವ್ಯಾಲಯ ಪ್ರಕಾಶನ, ಮೈಸೂರು.

ಜರಿಮಲೆ ನಾಯಕರು (ಕ್ರಿ.ಶ. ೧೫೦೦-೧೮೦೦) ಡಿ.ಎನ್. ಯೋಗೀಶ್ವರಪ್ಪ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ೮೦-೨, ೨೦೦೨.

ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಶ್ಯಾಮಲ್ ಸಿ.ಆರ್. ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ೨೦೦೮.

ಬಳ್ಳಾರಿ ಜಿಲ್ಲಾ ಗ್ಯಾಜೆಟಿಯರ್

ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ವಿರೂಪಾಕ್ಷಿ ಪೂಜಾರಹಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ ಸಂಶೋಧಿತ ಲೇಖನಗಳು, ಕುಂ.ಬಾ. ಸದಾಶಿವಪ್ಪ, ಹೇಮಂತ ಪ್ರಕಾಶನ, ಕುಂಚೂರು, ೧೯೯೦.

ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಡಾ.ಜೆ.ಎಂ. ನಾಗಯ್ಯ.

ಅನುವಾದ ಮರೆತುಹೋದ ಮಹಾ ಸಾಮ್ರಾಜ್ಯ, ಸದಾನಂದ ಕನವಳ್ಳಿ ಅನುವಾದ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೨.

ಮರೆಯಲಾರದ ಸಾಮ್ರಾಜ್ಯ, ಬಾಲಸುಬ್ರಹ್ಮಣ್ಯ, ಅನುವಾದ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಮರೆಯಲಾರದ ಸುರಪುರ ರಾಜರ ಚರಿತ್ರೆ, ಕೃಷ್ಣಮಾಚಾರ್ಯ ಬಿ., ೨೦೦೨.

ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು, ಚಾರಿತ್ರಿಕ ಅಧ್ಯಯನ, ೨೦೦೪.

ಸುರಪುರ ಸಂಸ್ಥಾನ ಇತಿಹಾಸ ಕಪಟರಾಳ ಕೃಷ್ಣರಾವ್, ಮಂಜುನಾಥ ಪ್ರಕಾಶನ, ಬೆಂಗಳೂರು, ೧೯೭೭.

ಹರಪನಹಳ್ಳಿ ಪಾಳೆಯಗಾರರು, ಕುಂ.ಬಾ. ಸದಾಶಿವಪ್ಪ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೬

ಲೇಖನಗಳು

ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು, ಹೆಚ್. ತಿಪ್ಪೇಸ್ವಾಮಿ, ಇತಿಹಾಸ ದರ್ಶನ, ಸಂ. ೧೪-೧೫.

ಕೂಡ್ಲಿಗಿ ತಾಲೂಕಿನ ಪ್ರಾಗೈತಿಹಾಸಿಕ ನೆಲೆಗಳು, ಹೆಚ್. ತಿಪ್ಪೇಸ್ವಾಮಿ, ಇತಿಹಾಸ ದರ್ಶನ, ಸಂ. ೧೬.

ಆರ್ಕ್ಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ, ೧೯೧೬, ಆರ್.ಬಿ. ಫೂಟ್.



# TALUK WISE MAP OF BELLARY DISTRICT.




RAICHUR - DIST(SINDANUR - TQ

KOPPAL DISTRICT.

KARNOOL - DIST. ALOOR TALUK (A P)

GADAG - DISTRICT

HAVERI - DISTRICT

DAVANAGERE DISTRICT.

CHITRADURGA DIST.(MOLAKALMURU - TQ

ANANTHAPURA DISTRICT(A

SIRUGUPPA

HOSPET

BELLARY

SANDUR

H. B. HALLI

HADAGALI

KUDLIGI

0 15 30

kilometers

Prepared By
Dist. NRDMS Centre.
ZP,Bellary.

I N D

BELLARY
H. B. HAL
HADAGAI
HOSPET
KUDLIGI
SANDUR
SIRUGUPI
Taluk _I
Taluk _I



ಜರಿಮಲೆ ಕೋಟೆದ್ವಾರ



ಕೋಟೆ – ಬೆಟ್ಟ ಹತ್ತಲು ಮಾಡಿರುವ
ಬಂಡೆಯ ಮೆಟ್ಟಿಲಗಳು – ಜರಿಮಲೆ

